पूर्णप्रज्ञसंशोधनमन्दिरग्रन्थमाला-१५

वनमालिमिश्रविरचितः

# श्रुतिसिद्धान्तसङ्ग्रहः

सम्पादकः
डा. ए. वि. नागसम्पिगे
निदेशकः, पूर्णप्रज्ञसंशोधनमन्दिरम्, बेङ्गलूरु-२८

पूर्णप्रज्ञसंशोधनमन्दिरम्
पूर्णप्रज्ञविद्यापीठम्
बेङ्गलूरु - २८

Pūrṇaprajña Saṁśodhana Mandira Granthamālā - 15

# ŚRUTI SIDDHĀÑTA SAṄGRAHAḤ

## Of Vanamāli Miśra

*Editor*

**Dr. A.V. Nagasampige**
Director, Poornaprajna Samshodhana Mandiram, Bangalore-28

***Publisher :***
**Poornaprajna Samshodhana Mandiram**
**Poornaprajna Vidyapeetha,**
**Bangalore - 560 028**

**Śruti Siddhānta Saṅgrahaḥ -**

**Of Vanamāli Miśra**

*Published by :.*
**Poornaprajna Samshodhana Mandiram**
Poornaprajna Vidyapeetha, Bangalore - 560 028.

First Edition : 2002

*This publication is brought out by the generous financial help of*

**Sri N.S. Ramachandra Rao** Mysore
and
**Sri Ramesha Acharya** Mandya

Copies : 1000

Price : Rs. 140/-

*Type setting :*
**Poornaprajna Samshodhana Mandiram**
**Poornaprajna Vidyapeetha,**
**Bangalore - 560 028**

*Printed by :*
**Poornaprajna Mudrana**
Bangalore.

पूर्णप्रज्ञसंशोधनमन्दिरग्रन्थमाला-१५

वनमालिमिश्रविरचितः

# श्रुतिसिद्धान्तसङ्ग्रहः




सम्पादकः

**डा. ए. वि. नागसम्पिगे**

निदेशकः, पूर्णप्रज्ञसंशोधनमन्दिरम्, बेङ्गलूरु-२८

पूर्णप्रज्ञसंशोधनमन्दिरम्

पूर्णप्रज्ञविद्यापीठम्

बेङ्गलूरु - २८

वनमालिमिश्रविरचितः श्रुतिसिद्धान्तसङ्ग्रहः

पूर्णप्रज्ञसंशोधनमन्दिरम्
पूर्णप्रज्ञविद्यापीठम्
बेङ्गलूरु - २८

प्रथममुद्रणम् - २००२

मुद्रितपुस्तकसङ्ख्या - १०००

मूल्यम्- १४० रूप्यकाणि

पूर्णप्रज्ञसंशोधनमन्दिरविभागस्य
सङ्गणकयन्त्रे टङ्कितः ।

पूर्णप्रज्ञमुद्रणालये मुद्रितः ।

# आशीर्वचनम्

न्यायामृतसौगन्ध्य-ब्रह्मसूत्रसिद्धान्तमुक्तावल्यादिप्रबन्धप्रणयनेन दिक्षु-विदिक्षु विततयशसां विद्वन्मान्यानां वनमालिमिश्रमहोदयानां नूत्नोऽयं श्रुतिसिद्धान्तसङ्ग्रहग्रन्थः पूर्णप्रज्ञसंशोधनमन्दिरात् प्राकाश्यं नीत इति मोमुद्यते नश्चेतः ।

ग्रन्थवरश्चायं टीकाकृतां श्रीमज्जयतीर्थभिक्षूणां श्रीमद्व्यासतीर्थ-श्रीमच्चरणानां च ग्रन्थान् उपजीव्य रचित इति तदीयभणत्यैवाव-गम्यते । यथा -

श्रीमद्भाष्यकृतो वन्दे टीकाकृतस्तथा सतः ।
तदुच्छिष्टं हि सङ्कलन् गच्छेयं पूज्यतां सताम् ।। इति ।

प्राचीनाचार्याशयविशेषसङ्ग्रहेऽपि, अपूर्वा काचन विचारप्रणाली तत्र तत्र विद्योतत इत्यतिरोहितं विदुषाम् ।

अविद्यास्वरूपविमर्शः - जैनाद्युक्तमुक्तिस्वरूपविमर्शः - बौद्धमायिनोः साम्यविचारः - श्रुत्युर्थविमर्शक्रमश्च समेषां सचेतसा-ममन्दमानन्दं जनयतीत्यत्र न कापि संशीतिः । ग्रन्थस्यास्य प्रकाशने बद्धादरस्य श्रद्धया विद्यया च कर्मकृतवतः अस्मत्प्रियच्छात्रस्य डा.नागसम्पिगे आनन्दतीर्थस्य अस्मदाराध्यश्रीकृष्णानुग्रहमभ्यर्थयामः।

इत्यनेकनारायणस्मृतयः

दि. २०.०९.२००२
पूर्णप्रज्ञविद्यापीठम्
बेङ्गलूरु.

**श्रीविश्वेशतीर्थश्रीपादाः**
पेजावराधोक्षजमठाधीशाः, उडुपि

# ಶ್ರುತಿಸಿದ್ಧಾಂತ ಸಂಗ್ರಹ

## ಒಂದು ಪಕ್ಷಿನೋಟ

ಶ್ರೀ ವನಮಾಲಿ ಮಿಶ್ರರು ಶ್ರೀಕೃಷ್ಣನ ಆಡಂಬೋಲವಾದ ವೃಂದಾವನಕ್ಷೇತ್ರದ ಹತ್ತಿರದ ತ್ರಿಯುಗಪುರದವರು. ಭರದ್ವಾಜಗೋತ್ರದಲ್ಲಿ ಜನಿಸಿದ ಶ್ರೋತ್ರಿಯರು. ಜಗದ್ಗುರು ಶ್ರೀ ಮಧ್ವಾಚಾರ್ಯರ ಭಾಷ್ಯ ಮತ್ತು ಶ್ರೀಮಜ್ಜಯತೀರ್ಥರ ಟೀಕೆ ಹಾಗೂ ಶ್ರೀವ್ಯಾಸತೀರ್ಥರ ಕೃತಿಗಳಿಂದ ಪ್ರಭಾವಿತರಾಗಿ ಆ ಕೃತಿಗಳನ್ನು ಉಪಜೀವಿಸಿ ಗ್ರಂಥಗಳನ್ನು ರಚಿಸಿದವರು. ಈ ಮುನಿತ್ರಯರಲ್ಲಿ ಅವರಿಗಿರುವ ಭಕ್ತಿ ಅಸಾಧಾರಣ ಹಾಗೂ ಅನುಕರಣೀಯ. 'ಭಾಷ್ಯಕಾರರಿಗೆ ಮತ್ತು ಟೀಕಾಚಾರ್ಯರಿಗೆ ನಮಿಸುವೆ. ಅವರು ಹೇಳಿದ ವಿಷಯಗಳನ್ನೇ ಸಂಗ್ರಹಿಸಿ ಸುಜನರ ಗೌರವಾದರಗಳ ಪಾತ್ರನಾಗುವೆ' ಎಂದಿದ್ದಾರೆ-

**ಶ್ರೀಮದ್ ಭಾಷ್ಯಕೃತೋ ವಂದೇ ಟೀಕಾಕೃತಸ್ತಥಾ ಸತಃ ।**
**ತದುಚ್ಛಿಷ್ಟಂ ಹಿ ಸಂಗ್ರಹ್ಣನ್ ಗಚ್ಛೇಯಂ ಪೂಜ್ಯತಾಂ ಸತಾಮ್ ॥**

*(ಇದೇ ಕೃತಿಯ ಪದ್ಯ -2)*

ಇಲ್ಲಿ ಭಾಷ್ಯಕಾರರ, ಟೀಕಾಕಾರರ ನಾಮವನ್ನು ಸ್ಪಷ್ಟವಾಗಿ ತಿಳಿಸಿಲ್ಲವಾದರೂ ಇವರ ಮತ್ತೊಂದು ಕೃತಿ ಬ್ರಹ್ಮಸೂತ್ರಸಿದ್ಧಾಂತಮುಕ್ತಾವಲಿಯ ಮಂಗಲಶ್ಲೋಕ ಮತ್ತು ಅಂತಿಮಪದ್ಯಗಳಲ್ಲಿ ಶ್ರೀಮದಾಚಾರ್ಯರು ಮತ್ತು ಶ್ರೀ ಜಯತೀರ್ಥರು ಹಾಗೂ ಶ್ರೀ ವ್ಯಾಸತೀರ್ಥರನ್ನು ನಮಿಸಿರುವುದು ಸ್ಪಷ್ಟ ಮಾರ್ಗದರ್ಶಿಯಾಗಿದೆ-

**ಶ್ರೀಮದ್ ದ್ವೈಪಾಯನಂ ವಂದೇ ಮರುದಂಶಮರಿಂದಮಮ್ ।**
**ಕುಮತಾಬ್ಧೇರಗಸ್ತ್ಯಂ ಚ ಜಯತೀರ್ಥಂ ಮುನೀಶ್ವರಮ್ ॥**

*(ಬ್ರಹ್ಮಸೂತ್ರಮುಕ್ತಾವಲಿಯ ಮಂಗಲಪದ್ಯ)*

**ಯತಿಗುರುಮರುದಂಶಂ ಶ್ರೀಮದಾನಂದತೀರ್ಥಂ**
**ಮತಿನಿಧಿಜಯತೀರ್ಥಂ ವ್ಯಾಸತೀರ್ಥಂ ಚ ವಂದೇ ॥**

*(ಬ್ರಹ್ಮಸೂತ್ರಮುಕ್ತಾವಲಿಯ ಅಂತಿಮ ಪದ್ಯ)*

ಈ ಎರಡು ಪದ್ಯಗಳಲ್ಲಿ ಶ್ರೀಮಧ್ವರು ಮುಖ್ಯಪ್ರಾಣರ ಅವತಾರರೆಂದು ವರ್ಣಿಸಿರುವುದು ಗಮನಾರ್ಹ. ಟೀಕಾಚಾರ್ಯರು ದುರ್ಮತಸಾಗರವನ್ನು ಆಪೋಶನಗೈಯುವ ಅಗಸ್ತ್ಯರೆಂಬ ವರ್ಣನೆ ಚೇತೋಹಾರಿಯಾಗಿದೆ.

ಅವರ ಮತ್ತೊಂದು ಕೃತಿ ಮಧ್ವಮುಖಾಲಂಕಾರದಲ್ಲಿ ಶ್ರೀಮದಾಚಾರ್ಯರು ಮತ್ತು ಟೀಕಾಚಾರ್ಯರು ಹಾಗೂ ಶ್ರೀ ವ್ಯಾಸತೀರ್ಥರನ್ನು ನಮಿಸಿದ ಶೈಲಿ ಅಪೂರ್ವವಾಗಿದೆ-

**ಶ್ರೀಮನ್ಮಾರುತಮಾಚಾರ್ಯಂ ಮಾಯಿಮರ್ದನತತ್ಪರಮ್ ।**
**ಮುನೀಂದ್ರೋಪಾಸ್ಯಪಾದಾಬ್ಜಂ ಜ್ಞಾನಸಿಂಧುಂ ನಮಾಮ್ಯಹಮ್ ॥**

'ಮಾಯಾವಾದಿಗಳ ನಿರಾಕರಣೆಯಲ್ಲಿ ಬದ್ಧಾದರರಾದ ವಾಯ್ವಂಶರಾದ, ಯತಿವರ್ಯರಿಂದ ಆರಾಧ್ಯವಾದ ಪಾದಕಮಲವುಳ್ಳ, ಜ್ಞಾನಸಾಗರರಾದ ಶ್ರೀಮದಾಚಾರ್ಯರನ್ನು ನಮಿಸುವೆ.

**ತಾಂತ್ರಿಕಾಣಾಂ ಗುರುಂ ವಂದೇ ಜಯತೀರ್ಥಂ ಮುನೀಶ್ವರಮ್ ।**
**ಕುಮತಧ್ವಾಂತಚಂಡಾಂಶುಂ ವ್ಯಾಸತೀರ್ಥಂ ಧಿಯಾಂ ನಿಧಿಮ್ ॥**

ಶಾಸ್ತ್ರಮತ್ತು ಪಂಚರಾತ್ರಾದ್ಯಾಗಮಾನುಷ್ಠಾನನಿಷ್ಠರ ಗುರುಗಳಾದ ಸಂಯಮೀಂದ್ರರಾದ ಶ್ರೀ ಜಯತೀರ್ಥರಿಗೆ ನಮಿಸುವೆ. ಹಾಗೆಯೇ ದುರ್ಮತವೆಂಬ ಕತ್ತಲೆಯನ್ನು ಹೊಡೆದೋಡಿಸುವಲ್ಲಿ ಸೂರ್ಯನಂತಿರುವ, ಜ್ಞಾನಸಂಪತ್ತಿಯುಳ್ಳ ಶ್ರೀ ವ್ಯಾಸತೀರ್ಥರನ್ನು ನಮಿಸುವೆ.

ಈ ಎಲ್ಲ ಅವರ ಕೃತಿಗಳ ಪರಿಶೀಲನೆಯಿಂದ ಅವರು ದ್ವೈತಸಿದ್ಧಾಂತದ ಪಾರಮ್ಯವನ್ನು ಅರಿತು ಅನುಸರಿಸಿ ಕೃತಿರಚನೆ ಮಾಡಿರುವರೆಂದು ಸ್ಪಷ್ಟವಾಗಿ ತಿಳಿಯುತ್ತದೆ.

**ಇತರ ಕೃತಿಗಳು :**

ಪ್ರೊ। ಭಂಡಾರಕರ್ ಅವರ ರಿಪೋರ್ಟ ( 1882, ಪು. 108- 113) ನಲ್ಲಿ ಉಲ್ಲೇಖಿಸಿದಂತೆ ಇವರು ರಚಿಸಿದ ಇತರ ಕೃತಿಗಳನ್ನು ಹೀಗೆ ಉಲ್ಲೇಖಿಸಬಹುದಾಗಿದೆ-

1. ನ್ಯಾಯಾಮೃತಸೌಗಂಧ್ಯ
2. ನ್ಯಾಯರತ್ನಾಕರ
3. ಅದ್ವೈತಸಿದ್ಧಿಖಂಡನ
4. ಭಕ್ತಿರತ್ನಾಕರ
5. ಮಾರುತಮಂಡನ
6. ಜೀವೇಶಾಭೇದಧಿಕ್ಕಾರ
7. ಪ್ರಮಾಣಸಂಗ್ರಹ
8. ಬ್ರಹ್ಮಸೂತ್ರಸಿದ್ಧಾಂತಮುಕ್ತಾವಲೀ
9. ವಿಷ್ಣುತತ್ತ್ವಪ್ರಕಾಶ
10. ವೇದಾಂತದೀಪಿಕಾ
11. ವೇದಾಂತಸಿದ್ಧಾಂತಸಂಗ್ರಹ
12. ನ್ಯಾಯಾಮೃತತರಂಗಿಣೀ ಕಂಟಕೋದ್ಧಾರ
13. ಅಭಿನವ ಪರಿಮಳ
14. ಮಧ್ವಮುಖಾಲಂಕಾರ

**ಶ್ರುತಿಸಿದ್ಧಾಂತಸಂಗ್ರಹದ ಸಾರ :**

ಶ್ರೀ ವನಮಾಲಿ ಮಿಶ್ರರ ಈ ಕೃತಿ ಏಳು ಅಧ್ಯಾಯಗಳನ್ನು ಒಳಗೊಂಡಿದೆ.

**ಮೊದಲ ಅಧ್ಯಾಯದಲ್ಲಿ :** ಅಧಿಕಾರಿಗಳ ಸ್ವರೂಪ, ಗುರುವಿನ ಸ್ವರೂಪ, ಸುಖ-ದುಃಖ ಸಾಧನಗಳ ವಿವೇಚನೆ, ಅಜ್ಞಾನಮೂಲಕವಾದ ಸಂಸಾರಬಂಧನ, ಸಕಾಮಕರ್ಮದ ನಿಂದನೆ ಮೊದಲಾದ ವಿಷಯಗಳ ನಿರೂಪಣೆಯನ್ನು ಮಾಡಲಾಗಿದೆ.

**ಎರಡನೆಯ ಅಧ್ಯಾಯದಲ್ಲಿ :** ನಿಷ್ಕಾಮಕರ್ಮಾನುಷ್ಠಾನದ ಮಹತ್ತ್ವವನ್ನು ವಿವರಿಸಿ ಸುಜನರು ಶ್ರವಣ-ಮನನಗಳನ್ನು ಮಾಡಬೇಕೆಂದು ನಿರೂಪಿಸಲಾಗಿದೆ. ಪರಮಾತ್ಮನು ಅವ್ಯಕ್ತಸ್ವಭಾವನಾದರೂ ಭಕ್ತನ ಮೇಲೆ ಪ್ರಸನ್ನನಾಗಿ ತನ್ನ ಸಾಕ್ಷಾತ್ಕಾರ ಕರುಣಿಸುವನು. ಭಕ್ತನಿಗೆ ಮುಕ್ತಿಯನ್ನು ನೀಡಿ ಅಲ್ಲಿ ಕೊನೆಯಿಲ್ಲದ ಆನಂದವನ್ನು ಕರುಣಿಸುವನು. ಮುಕ್ತರು ವೈಕುಂಠಲೋಕದಲ್ಲೇ ಇರಬೇಕೆಂಬ ನಿಯಮವಿಲ್ಲ. ಭೂಲೋಕ, ಸ್ವರ್ಗಲೋಕಗಳಲ್ಲೂ ಇರಬಹುದಾಗಿದೆ. ನಾಲ್ಕು ಬಗೆಯ ಮುಕ್ತರೂ ಹರಿಯ ಕರುಣೆಯಿಂದ ಅವರ ಯೊಗ್ಯತೆಗೆ ಅನುಗುಣವಾದ ಆನಂದವನ್ನು ಅನುಭವಿಸುವರು. ಇಲ್ಲಿ ಪ್ರಾಸಂಗಿಕವಾಗಿ ಜೈನ, ಬೌದ್ಧ, ತಾರ್ಕಿಕ, ಸಾಂಖ್ಯದರ್ಶನಗಳ ಮುಕ್ತಿಸ್ವರೂಪವನ್ನು ವಿಮರ್ಶಿಸಿ ಆಯಾ ಸಿದ್ಧಾಂತಗಳ ಚಿಂತನೆಯ ಕೊರತೆಯನ್ನು ಎತ್ತಿ ತೋರಿಸಿ, ತಮ್ಮದಾದ ಸಹಜವಾದ ಆನಂದದ ಅನುಭೂತಿಯೇ ಮುಕ್ತಿಯೆಂಬ ಶ್ರೌತಸಿದ್ಧಾಂತವನ್ನು ಎತ್ತಿ ಹಿಡಿಯಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ :** ದೇಹ, ಇಂದ್ರಿಯ, ಮನಸ್ಸಿಗಿಂತ ವಿಭಿನ್ನನಾದ ಆತ್ಮನ ಅಸ್ತಿತ್ವವನ್ನು ಸಮರ್ಥಿಸಲಾಗಿದೆ.

ಜೀವನಲ್ಲಿ ಕಾಣಬರುವ ಸುಖ-ದುಃಖಗಳು ಹಾಗೂ ಕರ್ತೃತ್ವಶಕ್ತಿಯು ಸಹಜವಾಗಿದೆ. ಕರ್ತೃತ್ವವಾಗಲೀ ಜೈವಗುಣಗಳಾಗಲೀ ಕಾಲ್ಪನಿಕವಲ್ಲ. ಅಣುವಾದ ಜೀವನು ಪ್ರಕಾಶರೂಪದಿಂದ ದೇಹದಲ್ಲೆಲ್ಲ ವ್ಯಾಪಿಸಿರುವ ಕಾರಣ ಸಮಗ್ರದೇಹದಲ್ಲಿ ನಡೆಯುವ ಸುಖ-ದುಃಖಗಳ ಅನುಭೂತಿಯನ್ನು ಪಡೆಯುವನು. ಜೀವನಿಗೆ ಎಚ್ಚರ, ಕನಸು, ಗಾಢನಿದ್ರೆ, ಮೂರ್ಛೆ ಮೊದಲಾದ ಅವಸ್ಥೆಗಳಿವೆ. ಯಮ-ನಿಯಮವೇ ಮೊದಲಾದ ಯೋಗಸಾಧನಗಳಿಂದ ಜೀವನು ಪರಮಾತ್ಮನ ಸಾಕ್ಷಾತ್ಕಾರ ಪಡೆಯಬಹುದು.

**ನಾಲ್ಕನೆಯ ಅಧ್ಯಾಯದಲ್ಲಿ :** ಜನ್ಮಾದಿಕಾರಣತ್ವವು ಶ್ರೀಹರಿಯ ಅಸಾಧಾರಣ ಲಕ್ಷಣವೆಂದು ನಿರೂಪಿಸಿ, ಪ್ರಕೃತಿಯ ವಿಕಾಸದ ಮೂಲಕ ನಡೆಯುವ ಸೃಷ್ಟಿಯ ವಿವರ ನೀಡಲಾಗಿದೆ. ಶ್ರೀಹರಿಯು ಸರ್ವ ಶಬ್ದಗಳಿಂದ ವಾಚ್ಯನೆಂಬ ಮಧ್ವಸಿದ್ಧಾಂತದ ಮತ್ತೊಂದು ಮುಖ್ಯ ಪ್ರಮೇಯದ ಬಗ್ಗೆ ಒತ್ತು ನೀಡಿ ಅದನ್ನೂ ಸಮರ್ಥಿಸಲಾಗಿದೆ. ಶ್ರೀಹರಿಯು ಮೂಲರೂಪ ಮತ್ತು ಅವತಾರರೂಪಗಳಲ್ಲಿ ಸಮಾನನು, ನಿತ್ಯವಾದ ಶರೀರವುಳ್ಳವನು. ಅವನಿಂದ ನಡೆಸಲ್ಪಡುವ ಉತ್ಪತ್ತಿ ಹಾಗೂ ವಿನಾಶಗಳು ನಾಲ್ಕು ಬಗೆಯಾಗಿವೆ ಎಂಬ ಮುಖ್ಯಪ್ರಮೇಯವನ್ನೂ ಇಲ್ಲಿ ಸೂಕ್ಷ್ಮವಾಗಿ ಬಣ್ಣಿಸಲಾಗಿದೆ.

**ಐದನೆಯ ಅಧ್ಯಾಯದಲ್ಲಿ :** 'ವಿಶೇಷ' ಸಮರ್ಥನೆಯು ಸುಂದರವಾಗಿ ಮೂಡಿ ಬಂದಿದೆ. ಎಲ್ಲಿ ಅಭೇದವು ಪ್ರಮಾಣಗಳಿಂದ ಸಿದ್ಧವಾಗಿದ್ದು ಭೇದವ್ಯವಹಾರವು ಕಾಣಬರುವುದೋ ಅದು ವಿಶೇಷತತ್ತ್ವಾಂಗೀಕಾರದಿಂದ ಮಾತ್ರ ಸಾಧ್ಯವೆಂದು ಸಮರ್ಥಿಸಲಾಗಿದೆ. ಈ ವಿಶೇಷತತ್ತ್ವದ ಅಂಗೀಕಾರ ಅದ್ವೈತವಾದಿಗಳಿಗೂ ಅನಿವಾರ್ಯವೆಂದು ಪ್ರತಿಪಾದಿಸಿ, ಬ್ರಹ್ಮನು ವಿಶ್ವಕ್ಕೆ ಕೇವಲ

ನಿಮಿತ್ತಕಾರಣ ಮತ್ತು ಎಲ್ಲ ಶಬ್ದಗಳಿಂದ ಮುಖ್ಯವೃತ್ತಿಯಿಂದ ಪ್ರತಿಪಾದ್ಯನೆಂದು ನಿರೂಪಿಸಲಾಗಿದೆ. ಈ ಪ್ರಸಂಗದಲ್ಲಿ ಉಭಯತ್ರ ಪ್ರಸಿದ್ಧ, ಅನ್ಯತ್ರಪ್ರಸಿದ್ಧ, ಅನ್ಯತ್ರೈವ ಪ್ರಸಿದ್ಧ ಶಬ್ದಗಳ ವಿವರಣೆಯಲ್ಲಿ ಚಂದ್ರಿಕೆಯ ಗಾಢಪ್ರಭಾವವನ್ನು ಈ ಕೃತಿಯಲ್ಲಿ ಓದುಗರು ಗುರುತಿಸಹುದು. ಬ್ರಹ್ಮಸೂತ್ರಗಳ ವ್ಯಾಖ್ಯಾನದಲ್ಲಿ ಆನಂದಮಯಾಧಿಕರಣದಲ್ಲಿ ಅದ್ವೈತವ್ಯಾಖ್ಯಾನ ಪದ್ಧತಿಯನ್ನು ವಿಮರ್ಶಿಸಿ ಅನ್ನಮಯನಿಂದ ಆನಂದಮಯನ ವರೆಗಿನ ಐದೂ ಪ್ರಕರಣಗಳಲ್ಲಿ ಬ್ರಹ್ಮಸ್ವರೂಪದ ಪ್ರತಿಪಾದನೆ ಇರುವುದನ್ನು ಬಹು ಸುಂದರವಾಗಿ ನಿರೂಪಿಸಲಾಗಿದೆ. 'ಬ್ರಹ್ಮನು ಅಕರ್ತೃ ನಿರ್ಗುಣ' ಇತ್ಯಾದಿ ವೇದವಾಕ್ಯಗಳ ಆಂತರ್ಯವನ್ನು ನಿರೂಪಿಸಿ, ಉಪಾಸನೆಗೆ ಸತ್ಯವಾದುದು ಮಾತ್ರವೇ ವಿಷಯವಾಗಬಹುದೆಂದು ಸಮರ್ಥಿಸಿ ಭಕ್ತಿಯ ಸ್ವರೂಪವಿವೇಚನೆಯೊಂದಿಗೆ ಈ ಅಧ್ಯಾಯವು ಕೊನೆಗೊಂಡಿದೆ.

**ಆರನೆಯ ಅಧ್ಯಾಯದಲ್ಲಿ :** ಶ್ರೀಹರಿಯ ಲೋಕವನ್ನು ಹೊರತು ಪಡಿಸಿ ಉಳಿದೆಲ್ಲ ಲೋಕಗಳೂ ಅನಿತ್ಯವೆಂಬ ಪ್ರಜ್ಞೆಯೊಂದಿಗೆ ವೈರಾಗ್ಯವನ್ನು ಸಂಪಾದಿಸಿ ಶ್ರವಣ-ಮನನಗಳಲ್ಲಿ ತೊಡಗಬೇಕೆಂದು ತಿಳಿಸಿ, ಜೀವೇಶ್ವರರ ನಡುವೆ ಐಕ್ಯೋಪಾಸನೆಯು ಬಹಳ ಅನರ್ಥವನ್ನು ತರುವುದೆಂದು ಪ್ರತಿಪಾದಿಸಲಾಗಿದೆ. ಜೀವೇಶ್ವರರಲ್ಲಿ ಕಾಣುವ ಭೇದವು ವ್ಯಾವಹಾರಿಕವೆಂಬ ಅಂಶವು ಅದ್ವೈತಸಿದ್ಧಾಂತದ ಕಲ್ಪನೆ ಮಾತ್ರ. ಯಾವ ಶ್ರುತಿ-ಸ್ಮೃತಿಗಳೂ ಹಾಗೂ ಬ್ರಹ್ಮಸೂತ್ರಗಳೂ ಭೇದವು ಅಸತ್ಯವೆಂದು ಪ್ರತಿಪಾದಿಸಿಲ್ಲ. ಈ ಅಧ್ಯಾಯದಲ್ಲಿ ಕಾಣುವ ಮತ್ತೊಂದು ಗಮನಾರ್ಹ ಪ್ರಮೇಯ- ಅದ್ವೈತವಾದಿಗಳಿಗೂ ಬೌದ್ಧರಿಗೂ ಇರುವ ಸಾಮ್ಯ-ವೈಷಮ್ಯಗಳ ವಿಮರ್ಶೆಯ ಜೊತೆಗೆ ಚಾರ್ವಾಕ, ಜೈನ, ಬೌದ್ಧ, ತಾರ್ಕಿಕಮತಗಳ ಖಂಡನೆ ಮುದ ನೀಡುವಂತಹದು. ಅನಂತರ **'ಪರೇಽವ್ಯಯೇ ಸರ್ವ ಏಕೀಭವಂತಿ', 'ತತ್ತ್ವಮಸಿ', 'ದ್ವಿತೀಯಾದ್ ವೈ ಭಯಂ ಭವತಿ', 'ವಿಭೇದಜನಕೇಽಜ್ಞಾನೇ'** ಮೊದಲಾದ ಅನೇಕ ಶ್ರುತಿಗಳ ಅರ್ಥದ ವಿವೇಚನೆ ಮಾಡಿ ವಿಶ್ವಸತ್ಯತ್ವ, ಜೀವ-ಜಡಭೇದ, ಹರಿಪಾರಮ್ಯಗಳನ್ನು ಸಮರ್ಥಿಸಲಾಗಿದೆ.

**ಏಳನೆಯ ಅಧ್ಯಾಯದಲ್ಲಿ : 'ನೇತಿ ನೇತಿ', 'ರೂಪಂ ರೂಪಂ ಪ್ರತಿರೂಪೋ ಬಭೂವ', 'ಅಹಂ ಮನುರಭವಂ ಸೂರ್ಯಶ್ಚ', 'ಅಸಂಗೋ ಹ್ಯಯಂ ಪುರುಷಃ'** ಇತ್ಯಾದಿ ಅನೇಕ ಶ್ರುತಿಗಳ ವಿಮರ್ಶೆಯ ಜೊತೆಗೆ ಪ್ರಾಸಂಗಿಕವಾಗಿ ಸ್ವಪ್ನದ ಸತ್ಯತೆಯನ್ನು ಸಮರ್ಥಿಸಿ ಕೃತಿಯನ್ನು ಉಪಸಂಹಾರ ಮಾಡಲಾಗಿದೆ.

## ವಿಷಯಗಳ ವಿಸ್ತಾರ ಪರಿಶೀಲನೆ :

### 1. ಮುಕ್ತರು ಭೂರಾದಿಲೋಕದಲ್ಲಿ ಇರಬಹುದು :

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಆಗಮಗಳ ಹಿನ್ನೆಲೆಯಲ್ಲಿ ಮುಕ್ತಿಯ ನಾಲ್ಕು ಬಗೆಯನ್ನು ವಿವರಿಸಿ, ಮುಕ್ತಚೇತನನು ಅವನ ಯೋಗ್ಯತೆಗೆ ಅನುಗುಣವಾಗಿ

ಸ್ವರೂಪಭೂತವಾದ ಆನಂದವನ್ನು ಅನುಭವಿಸುತ್ತ ಭೂಮಿ-ಅಂತರಿಕ್ಷ-ಸ್ವರ್ಗ ಮೊದಲಾದ ಕಡೆ ಇರುತ್ತಾನೆಂದು ಪ್ರತಿಪಾದಿಸಿದ್ದಾರೆ. ಮುಕ್ತಿಯೆಂದರೆ ಅಸಹಜತೆಯನ್ನು ತೊರೆದು ಸಹಜರೂಪದಲ್ಲಿರುವುದು.

**'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'**

ಎಲ್ಲ ಮುಕ್ತರೂ ವೈಕುಂಠದಲ್ಲೇ ಇರುತ್ತಾರೆಂಬ ಭ್ರಮೆಯನ್ನು ಆಚಾರ್ಯರು ಪರಿಹರಿಸಿ, ಇರುವ ಸ್ಥಾನ ಮತ್ತು ಆನಂದಾನುಭೂತಿ ತಾರತಮ್ಯದ ಬಗ್ಗೆ ಸ್ಫುಟವಾದ ಬೆಳಕು ಚೆಲ್ಲಿದರು. ಈ ಮಾಧ್ವ ಚಿಂತನೆಯ ಗಾಢ ಪ್ರಭಾವ ಶ್ರೀ ವನಮಾಲಿ ಮಿಶ್ರರ ಮೂಲಕೃತಿ ಮತ್ತು ಅವರದೇ ಆದ ವ್ಯಾಖ್ಯಾನದಲ್ಲಿ ಹಾಸು ಹೊಕ್ಕಾಗಿದೆ-

**ಕೇಚಿದತ್ರೈವ ಮುಚ್ಯಂತೇ ಕೇಚಿತ್ ಕ್ಷೀರಜಲೋದಧೌ ।**
**ಕೇಚಿತ್ ವೈ ಸತ್ಯಲೋಕಾದೌ ಅಂತರಿಕ್ಷೇ ಹಿ ಕೇಚನ ॥** (2.41)

ಈ ಶ್ಲೋಕದ ಅವರ ವ್ಯಾಖ್ಯಾನದ ಸಾರ ಹೀಗಿದೆ-

ಜೀವನು, ಸ್ಥೂಲಶರೀರ ಮತ್ತು ಲಿಂಗಶರೀರಗಳಿಂದ ಹೊರಬಂದು ಜ್ಞಾನಘನನಾದ ಪರಮಾತ್ಮನನ್ನು ಪೊಂದಿ, ತನ್ನ ಸಹಜವಾದ ಸ್ವರೂಪಶರೀರದಿಂದ ಅಸ್ತಿತ್ವವನ್ನು ಪಡೆಯುವನು. ಅವನು ಮುಕ್ತಿಯಲ್ಲಿ ತನ್ನ ಬಯಕೆಯಂತೆ ಕಾಮನೆಗಳನ್ನು ಪೂರೈಸಿಕೊಳ್ಳುವನು. ಆತ್ಮತ್ವರೂಪಗುಣವನ್ನು ಉಪಾಸಿಸುವ ಮುಕ್ತನು ಬಿಂಬ ಸಾಕ್ಷಾತ್ಕಾರದ ನಂತರ, ಇಲ್ಲಿ ಪ್ರಾರಬ್ಧಕರ್ಮವನ್ನು ಅನುಭವಿಸಿದ ನಂತರ, ಶಾಸ್ತ್ರದಲ್ಲಿ ತಿಳಿಸಿದಂತೆ ಲಿಂಗಶರೀರವನ್ನು ತೊರೆದು ಶ್ವೇತದ್ವೀಪಪತಿಯಾದ ಪರವಾಸುದೇವನ ಸಂದರ್ಶನವನ್ನು ಒಮ್ಮೆ ಪಡೆದು ಅವನ ಕೃಪೆಯಿಂದ ಇಚ್ಛಾವರಣವನ್ನು ಕಳೆದುಕೊಂಡು ಅವನ ಅನುಜ್ಞೆಯಿಂದ ಯೋಗ್ಯತೆಗೆ ಅನುಗುಣವಾಗಿ ಭೂಮಿ, ಅಂತರಿಕ್ಷಾದಿ ಲೋಕಗಳಲ್ಲಿದ್ದು ತನ್ನ ಸ್ವರೂಪಾನಂದವನ್ನು ಅನುಭವಿಸುತ್ತಾನೆ.

ವಿಶಿಷ್ಟಜ್ಞಾನಸಂಪನ್ನರಾದ ಕೆಲವರು ಕ್ಷೀರಸಾಗರದಲ್ಲಿ ಮೌಕ್ತಸುಖವನ್ನು ಅನುಭವಿಸುತ್ತಾರೆ. ಅಲ್ಲಿಯೂ ಹೆಚ್ಚಿನ ಜ್ಞಾನವುಳ್ಳವರು ಶ್ರೀಹರಿಯ ಹತ್ತಿರದಲ್ಲಿ ಇರುವರು. ಸಾಲೋಕ್ಯಮುಕ್ತಿಯೆಂದರೆ, ಆಯಾ ಲೋಕದಲ್ಲಿರುವ ಭಗವಂತನ ಸನ್ನಿಧಿಯಲ್ಲಿ ಅವನ ಕೃಪೆಯಿಂದ ಸ್ವರೂಪಸುಖವನ್ನು ಅನುಭವಿಸುವುದು. ಶಂಖ-ಚಕ್ರ-ಗದಾಧಾರಿಯಾಗಿ ಪರಮಾತ್ಮನಂತೆ ಸುಂದರ ರೂಪ ಪಡೆಯುವವರು ಸಾರೂಪ್ಯಮುಕ್ತರು. ಶ್ರೀಹರಿಯ ಅತಿ ಹತ್ತಿರದಲ್ಲಿದ್ದು ಅವನ ಸನ್ನಿಧಾನವಿಶೇಷದಿಂದ ಸುಖಾನುಭವ ಪಡೆಯುವವರು ಸಾಮೀಪ್ಯಮುಕ್ತರು. ಶ್ರೀಹರಿಯ ದೇಹದಲ್ಲಿದ್ದು ಅವನ ಅಂಗಾಂಗಗಳಿಂದಲೇ ತಮ್ಮ ಯೋಗ್ಯತೆಗನುಗುಣವಾದ ಭೋಗಗಳನ್ನು ಪಡೆಯುವವರು ಸಾಯುಜ್ಯಮುಕ್ತರು. ಹೀಗೆ

ಕ್ರಮವಾಗಿ ಮುಕ್ತರು ಯೋಗ್ಯತೆಗನುಗುಣವಾಗಿ ಭೂಮಿಯಿಂದ ಕ್ಷೀರಸಾಗರದ ವರೆಗೆ ಉಚಿತ ಸ್ಥಳಗಳಲ್ಲಿರುವರು.

ಇಲ್ಲಿ ಭಾಷ್ಯವಾಕ್ಯಗಳನ್ನೇ ಉಲ್ಲೇಖಿಸಿರುವುದು ಗಮನಾರ್ಹ -

**ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ।**
**ಅತ್ರೈವ ಚ ಸ್ಥಿತಿಸ್ತೇಷಾಮ್ ಅಂತರಿಕ್ಷೇ ತು ಕೇಚನ ॥**
**ಕೇಚಿತ್ ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಚಾಪರೇ ।**
**ಕೇಚಿತ್ ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಮ್ ॥**
**ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ಸಮೀಪಗಾಃ ।**
**ಸಾಲೋಕ್ಯಂ ಚ ಸರೂಪತ್ವಂ ಸಾಮೀಪ್ಯಂ ಯೋಗಮೇವ ಚ ।**
**ಇಮಾಮಾರಭ್ಯ ಸರ್ವತ್ರ ಯಾವತ್ಸು ಕ್ಷೀರಸಾಗರೇ ॥** (ಪು. ..)

**2. ಪ್ರಾರಬ್ಧಕರ್ಮವು ಜ್ಞಾನದಿಂದ ನಾಶವಾಗಲಾರದು :**

ಭಗವಂತನ ಅಪರೋಕ್ಷ (ಸಾಕ್ಷಾತ್ಕಾರ) ವನ್ನು ಪಡೆದ ಜ್ಞಾನಿಯು ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುವನು. ಬೆಂಕಿಯು ಬೃಹದಾಕಾರದ ಹತ್ತಿಯ ಗಂಟನ್ನು ನಾಶ ಪಡಿಸುವಂತೆ ಬ್ರಹ್ಮಜ್ಞಾನದ ಬೆಂಕಿಯೂ ಎಲ್ಲ ಪಾಪಕರ್ಮಗಳನ್ನೂ ನಾಶ ಪಡಿಸುತ್ತದೆ ಎಂಬುದಾಗಿ ಶ್ರುತಿಸ್ಮೃತಿಗಳ ಅಭಿಪ್ರಾಯವಾಗಿದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನೂ '**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ**'- ಜ್ಞಾನದ ಬೆಂಕಿ ಎಲ್ಲ ಕರ್ಮವನ್ನು ನಾಶಪಡಿಸುತ್ತದೆ ಎಂಬುದಾಗಿ ವ್ಯಾಖ್ಯಾನಿಸಿದ್ದಾನೆ. ಇದರ ಹೃದಯವನ್ನು ಸರಿಯಾಗಿ ಅರ್ಥೈಸಿ ಕೊಳ್ಳಬೇಕು. ಸಂಚಿತ-ಆಗಾಮಿ-ಪ್ರಾರಬ್ಧವೆಂದು ಕರ್ಮವು ಮೂರು ಬಗೆಯಾಗಿದೆ. ಅಪರೋಕ್ಷಜ್ಞಾನದಿಂದ ಸಂಚಿತಕರ್ಮವು (ಪಾಪವು) ನಾಶ ಹೊಂದುವುದು. ಜ್ಞಾನಜನನದ ನಂತರ ಮಹಾತ್ಮರ ಅಪರಾಧದಿಂದ ಉಂಟಾಗುವ ಪಾಪವು ಖಚಿತವಾಗಿ ಲೇಪವಾಗುವುದು. ಇದನ್ನು ಹೊರತು ಪಡಿಸಿ ಉಳಿದ (ಆಗಾಮಿಕರ್ಮ) ಪಾಪಗಳು ಲೇಪವಾಗುವುದಿಲ್ಲ. 'ಪ್ರಾರಬ್ಧಕರ್ಮದ ಭೋಗ ಅನಿವಾರ್ಯವಾಗಿದೆ. ಬಿಂಬಾಪರೋಕ್ಷದ ನಂತರ ಪ್ರಾರಬ್ಧಕರ್ಮ ಮುಗಿಯುವ ವರೆಗೆ ಎಷ್ಟು ದೇಹಗಳನ್ನು ಎತ್ತುವುದು ಅನಿವಾರ್ಯವಿದೆಯೋ ಅಷ್ಟು ದೇಹಗಳನ್ನು ಎತ್ತಲೇಬೇಕು. ಅನಂತರ ಬ್ರಹ್ಮಪ್ರಾಪ್ತಿಯಾಗುವುದು. '**ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ**' (ಛಾಂದೋಗ್ಯ 6. 14.02) ಎಂಬ ಛಾಂದೋಗ್ಯ ಶ್ರುತಿ ಹಾಗೂ '**ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ**' (ಬ್ರಹ್ಮಸೂತ್ರ 4. 4. 19) ಎಂಬ ಬ್ರಹ್ಮಸೂತ್ರವೂ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ.

ಆದರೆ ಪ್ರಾರಬ್ಧಕರ್ಮದ ಸ್ವರೂಪದ ಬಗ್ಗೆ ಅದ್ವೈತಮತಾಚಾರ್ಯರು ಮತ್ತು ವಿಶಿಷ್ಟಾದ್ವೈತಮತಗ್ರಂಥಗಳಲ್ಲಿ ಗೊಂದಲ ಇದೆ. ಶ್ರೀಶಂಕರಾಚಾರ್ಯರು 'ಅನಾರಬ್ಧ-ಕಾರ್ಯೇ ಏವ ತು ಪೂರ್ವೇ ತದವಧೇಃ' ಎಂಬ ಬ್ರಹ್ಮಸೂತ್ರವ್ಯಾಖ್ಯಾನದಲ್ಲಿ (4. 1. 15) 'ಬ್ರಹ್ಮಜ್ಞಾನಿಯೂ ಅದ್ವೈತ ತತ್ವಸಾಕ್ಷಾತ್ಕಾರದ ನಂತರ ಸ್ವಲ್ಪ ಕಾಲ ಶರೀರ ಧರಿಸುವನೋ ಇಲ್ಲವೋ? ಎಂಬ ಈ ವಿಷಯದಲ್ಲಿ ವಿವಾದ ಮಾಡುವ ಅಗತ್ಯವಿಲ್ಲ. ಬ್ರಹ್ಮಜ್ಞಾನಿಯೂ ಸ್ವಲ್ಪಕಾಲ ಶರೀರವನ್ನು ಧರಿಸುವನು. ಅನುಭವಕ್ಕೆ ಮಾತ್ರವೇ ಗೋಚರವಾದ ಅದ್ವೈತ ತತ್ವಸಾಕ್ಷಾತ್ಕಾರ ಮತ್ತು ದೇಹಧಾರಣೆಯನ್ನು ಮತ್ತೊರ್ವ ಹೇಗೆ ಅಲ್ಲಗಳೆಯಲು ಸಾಧ್ಯವಿದೆ' ಎಂದಿದ್ದಾರೆ.

**'ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ॥'** (4. 1. 15, ಪು. 475)

**'ಅಪಿ ಚ ನೈವಾತ್ರ ವಿವದಿತವ್ಯಂ, ಬ್ರಹ್ಮವಿದಾ ಕಿಂಚಿತ್‌ಕಾಲಂ ಶರೀರಂ ಧ್ರಿಯತೇ ನ ವೇತಿ । ಕಥಂ ಹ್ಯೇಕಸ್ಯ ಸ್ವಹೃದಯಪ್ರತ್ಯಯಂ ಬ್ರಹ್ಮವೇದನಂ ದೇಹಧಾರಣಂ ಚಾಪರೇಣ ಪ್ರತಿಕ್ಷೇಪ್ತುಂ ಶಕ್ಯೇತ ।'**

ಇದರಂತೆ **'ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ'** (4.2. 19) ಸೂತ್ರ ವ್ಯಾಖ್ಯಾನ ದಲ್ಲಿ 'ಅಪ್ರಾರಬ್ಧ ಪುಣ್ಯಪಾಪಗಳು ಜ್ಞಾನದ ಮಹಿಮೆಯಿಂದ ನಶಿಸುವವೆಂದು ಈ ಹಿಂದೆ ವರ್ಣಿಸಲಾಗಿದೆ. ಪ್ರಾರಬ್ಧ ಪುಣ್ಯಪಾಪಗಳ ಫಲವನ್ನು ಮಾತ್ರ ಉಪಭೋಗಿಸಿ (ಅನುಭವಿಸಿಯೇ) ಬ್ರಹ್ಮಪ್ರಾಪ್ತಿ ಸಾಧ್ಯವಾಗುವುದು. ಏಕೆಂದರೆ **''ತಸ್ಯ ತಾವದೇವ ಚಿರಂ''** (ಛಾ. 6. 14.2) ಎಂಬ ಶ್ರುತಿಯು ಪ್ರಾರಬ್ಧಕರ್ಮದ ಉಪಭೋಗದ ನಂತರ ಬ್ರಹ್ಮಪ್ರಾಪ್ತಿಯನ್ನು ಪ್ರತಿಪಾದಿಸುತ್ತಿದೆ' ಎಂದಿದ್ದಾರೆ.

**'ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ॥'** (4.2. 19, ಪು. 478)

**ಅನಾರಬ್ಧಕಾರ್ಯಯೋಃ ಪುಣ್ಯಪಾಪಯೋರ್ವಿದ್ಯಾಸಾಮರ್ಥ್ಯಾತ್ ಕ್ಷಯ ಉಕ್ತಃ । ಇತರೇ ತ್ವಾರಬ್ಧಕಾರ್ಯೇ ಪುಣ್ಯಪಾಪೇ ಉಪಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪದ್ಯತೇ । 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ' (ಛಾ. 6. 14.2) ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಇತ್ಯೇವಮಾದಿಶ್ರುತಿಭ್ಯಃ ।**

ಹೀಗೆಯೇ ಭಾಮತೀ ಮತ್ತು ಇಷ್ಟಸಿದ್ಧಿಗ್ರಂಥಗಳಲ್ಲೂ ಅಭಿಪ್ರಾಯವು ಸ್ಪಷ್ಟವಾಗಿದೆ-

**'ತಸ್ಮಾದಾಗಮಾನುಸಾರತೋಽಸ್ತಿ ಪ್ರಾರಬ್ಧವಿಪಾಕಾನಾಂ ಕರ್ಮಣಾಂ ಪ್ರಕ್ಷಯಾಯ ತದೀಯಸಮಸ್ತಪಾಪೋಪಭೋಗಪ್ರತೀಕ್ಷಾ ಸತ್ಯಪಿ ತತ್ತ್ವಸಾಕ್ಷಾತ್ಕಾರೇ'** (ಪು. 957)

**ತಸ್ಮಾದ್ ವಿದುಷೋಽಪಿ ಕಿಂಚಿತ್‌ಕಾಲಂ ಶರೀರಸ್ಥಿತೇರಭ್ಯುಪೇಯತ್ವಾತ್ ತಾವನ್ಮಾತ್ರ-ಹೇತುರವಿದ್ಯಾಶೇಷಗಂಧೋಽಭ್ಯುಪೇಯಃ ।**

ಈ ವಿಶ್ಲೇಷಣೆಯಿಂದ ಅದ್ವೈತದರ್ಶನಕ್ಕೆ ಒಂದು ಲಾಭವಿದೆ-

ಅದ್ವೈತತತ್ವಸಾಕ್ಷಾತ್ಕಾರವೆಂದರೆ, ಮಿಥ್ಯಾಭೂತವಾದ ಭೇದಜ್ಞಾನವನ್ನು ತೊರೆದು ಜೀವ ಮತ್ತು ಬ್ರಹ್ಮ ಒಂದೇ ಆಗಿ ಇರುವುದು ಅಥವಾ ಒಂದೇ ಚೈತನ್ಯ ಮತ್ತು ಅದು ಮಾತ್ರವೇ ಸತ್ಯವೆಂಬ ಜ್ಞಾನ ಜಾಗೃತವಾಗಿರುವುದು. ಈ ಅನುಭೂತಿಯ ಮತ್ತೊಂದು ಮುಖ ವಿಶ್ವಮಿಥ್ಯಾತ್ವದ ಅನುಸಂಧಾನದಲ್ಲಿ ಪರ್ಯವಸಾನವಾಗುವುದು. ಆಗ ತತ್ವಸಾಕ್ಷಾತ್ಕಾರವಾದ ವ್ಯಕ್ತಿಗೆ ತನ್ನನ್ನೂ ಹೊರತುಪಡಿಸಿದ ಎಲ್ಲ ವಿಶ್ವವೂ ಮೂರು ಕಾಲದಲ್ಲೂ ಅಸ್ತಿತ್ವರಹಿತವೆಂಬ ಜ್ಞಾನೋದಯವಾದಾಗ, ಅವನು ಶಿಷ್ಯಸಂಗ್ರಹ- ಉಪದೇಶ- ಭಿಕ್ಷಾಟನ ಮುಂತಾದ ಕಾರ್ಯಗಳಲ್ಲಿ ತೊಡಗಲು ಸಾಧ್ಯವಾಗಲಾರದು. ಗೌಡಪಾದರು ಶಂಕರರಂತಹ ಅದ್ವೈತ ದಾರ್ಶನಿಕರೂ ಶಿಷ್ಯಸಂಗ್ರಹ, ಭಿಕ್ಷಾಟನಾದಿಗಳಲ್ಲಿ ತೊಡಗಿರುವ ಕಾರಣ ಅವರಿಗೆ ತತ್ವಸಾಕ್ಷಾತ್ಕಾರವಾಗಿಲ್ಲವೆಂದೇ ಹೇಳಬೇಕಾಗುವುದು. ಉಪದೇಶಿಸುವ ಯಾವ ವ್ಯಕ್ತಿಗಳಿಗೂ ತತ್ವಾನುಭವವಿಲ್ಲ. ಮತ್ತು ಅವರು ಅಪಕ್ವರು. ತತ್ವಸಾಕ್ಷಾತ್ಕಾರ ಇರುವವರು ನಮ್ಮ ನಡುವೆ ಇದ್ದು ಉಪದೇಶಿಸುವಂತಿಲ್ಲ. ಬ್ರಹ್ಮಜ್ಞಾನಿಗೂ ಪ್ರಾರಬ್ಧಕರ್ಮದ ಉಪಭೋಗ ಅನಿವಾರ್ಯವೆಂದು ಒಪ್ಪಿ, ಅವಿದ್ಯೆಯ ಅಲ್ಪಭಾಗವು ತತ್ವಸಾಕ್ಷಾತ್ಕಾರದ ನಂತರವೂ ಮುಂದುವರೆಯುವುದೆಂದು ಒಪ್ಪಿದಲ್ಲಿ, ಶಂಕರಾಚಾರ್ಯರೇ ಮೊದಲಾದ ದರ್ಶನಾಚಾರ್ಯರಿಗೆ ತತ್ವಸಾಕ್ಷಾತ್ಕಾರ ಇದೆಯೆಂದೂ ಆ ಪರಿಪಕ್ವ ಅನುಭವದ ಹಿನ್ನೆಲೆಯಲ್ಲಿ ಅವರು ಅದ್ವೈತವನ್ನು ಬೋಧಿಸುತ್ತಿರುವ ಕಾರಣ ಅವರ ಉಪದೇಶವು ಪ್ರಾಮಾಣಿಕವೆಂದೂ ಪ್ರತಿಪಾದಿಸಬಹುದು. ಇದು ಪ್ರಾರಬ್ಧಕರ್ಮ ಮತ್ತು ಅವಿದ್ಯಾಲೇಶವನ್ನು ಒಪ್ಪುವುದರಿಂದ ಆಗುವ ಲಾಭ.

ಆದರೆ ವಸ್ತುನಿಷ್ಠವಾಗಿ ವಿಮರ್ಶಿಸಿದರೆ, ಅದ್ವೈತಿಗಳು ಈ ಲಾಭವನ್ನು ಬಳಸಿಕೊಳ್ಳುವಂತೆ ಇಲ್ಲ. ಏಕೆಂದರೆ, ಅವಿದ್ಯೆಯು ಸಖಂಡವಸ್ತುವಲ್ಲ. 'ಇರುವುದು ಒಂದೇ ಚೇತನ. ಉಳಿದುದೆಲ್ಲ ಮಿಥ್ಯೆಯೆಂಬ ತತ್ವಜ್ಞಾನ ಉದಿಸಿದ ನಂತರವೂ ಅವಿದ್ಯೆ ಸ್ವಲ್ಪ ಕಾಲ ಮುಂದೆ ಉಳಿಯುವುದಾದರೆ, ಮುಂದೊಂದು ದಿನ ಸಂಪೂರ್ಣ ನಾಶವಾಗುವುದೆಂಬುದು ಕೇವಲ ಊಹೆಯಾದೀತಷ್ಟೇ! ಪ್ರಖರನಾದ ಸೂರ್ಯನಲ್ಲಿ ಅಲ್ಪವಾದ ಅಂಧಕಾರವು ಹೇಗೆ ಇರಲಾರದೋ ಹಾಗೆಯೇ ಅದ್ವೈತಾನುಭೂತಿ ಇರುವ ವ್ಯಕ್ತಿಯಲ್ಲಿ ಅವಿದ್ಯೆಯ ಲೇಶವು ಅನುವೃತ್ತವಾಗಿದೆ ಮತ್ತು ಅದ್ವೈತತತ್ವಜ್ಞಾನೋದಯದ ನಂತರವೂ ಅಲ್ಪ ಅಜ್ಞಾನವು ಇರಬಹುದೆಂಬ ವಾದವು ಅದ್ವೈತವಾದಕ್ಕೆ ಶೋಭೆ ತರುವಂತಹದಲ್ಲ. ಇದಲ್ಲದೇ ಅದ್ವೈತತತ್ವಸಾಕ್ಷಾತ್ಕಾರದ ಹಿರಿಮೆಗೆ ಕುಂದು ತಂದಂತಾಗುವುದು. ಆದ್ದರಿಂದ ಐಕ್ಯತತ್ವಜ್ಞಾನದ ಜನ್ಮವಾದೊಡನೆಯೇ ಮುಂದೆಯೂ 'ಈ ದೇಹ ಸತ್ಯ' ಎಂಬ ಭ್ರಮೆ, 'ಶಿಷ್ಯರು ಇರುವರು' ಎಂಬ ಭ್ರಮೆ, ಮುಂದುವರೆಯಲಾರದು. ಇದರಂತೆಯೇ ಪ್ರಾರಬ್ಧಕರ್ಮದ ನೆಪವೊಡ್ಡಿ ಅನೇಕ ಜನ್ಮಗಳನ್ನು ಎತ್ತುವ ವಾದವನ್ನು ಪೋಷಿಸಲು ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿಯೇ

ಶ್ರೀಶಂಕರಾಚಾರ್ಯರು ತಮ್ಮ ಅನೇಕ ಕೃತಿಗಳಲ್ಲಿ 'ಪ್ರಾರಬ್ಧಕರ್ಮದ ಉಪಭೋಗ ಅನಿವಾರ್ಯ' ಎಂಬ ಶ್ರೌತವಾದ ಖಂಡನಾರ್ಹ ಅಥವಾ ಅರ್ಥವಾದವೆಂದು ವ್ಯಾಖ್ಯಾನಿಸಿ, ಅದ್ವೈತತತ್ವಜ್ಞಾನವು ದೇಹದ ಅಸ್ತಿತ್ವ- ಜನ್ಮಾಂತರ- ಪ್ರಾರಬ್ಧಕರ್ಮಾನುಭವಗಳನ್ನು ಸಹಿಸುವುದಿಲ್ಲವೆಂದು ವ್ಯಾಖ್ಯಾನಿಸಿದ್ದಾರೆ-

**ಉತ್ಪನ್ನೇ ತ್ವಾತ್ಮವಿಜ್ಞಾನೇ ಪ್ರಾರಬ್ಧಂ ನೈವ ಮುಂಚತಿ ।**
**ಇತಿ ಯತ್ ಶ್ರೂಯತೇ ಶಾಸ್ತ್ರೇ ತನ್ನಿರಾಕ್ರಿಯತೇಽಧುನಾ ॥**
**ತತ್ವಜ್ಞಾನೋದಯಾದೂರ್ಧ್ವಂ ಪ್ರಾರಬ್ಧಂ ನೈವ ವಿದ್ಯತೇ ।**
**ಅಜ್ಞಾನಿಜನಬೋಧಾರ್ಥಂ ಪ್ರಾರಬ್ಧಂ ವಕ್ತಿ ವೈ ಶ್ರುತಿಃ ॥** (ಅಪರೋಕ್ಷಾನುಭೂತಿ)

**ಸಮಾಧಾತುಂ ಬಾಹ್ಯದೃಷ್ಟ್ಯಾ ಪ್ರಾರಬ್ಧಂ ವದತಿ ಶ್ರುತಿಃ ।**
**ನ ತು ದೇಹಾದಿಸತ್ಯತ್ವಬೋಧನಾಯ ವಿಪಶ್ಚಿತಾಮ್ ॥**

ಇದೇ ಅಭಿಪ್ರಾಯವನ್ನು ವಿವೇಕಚೂಡಾಮಣಿಯಲ್ಲೂ ಕಾಣಬಹುದಾಗಿದೆ.

ಇದರಂತೆ ಬೃಹದಾರಣ್ಯಕ ಶ್ರುತಿವ್ಯಾಖ್ಯಾನದಲ್ಲಿರುವ ಶ್ರೀ ಶಂಕರಾಚಾರ್ಯರ ಮಾತು ಗಮನಾರ್ಹ. 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' (4.4.6) ಬ್ರಹ್ಮಜ್ಞಾನಿಯು ಇಲ್ಲಿಯೇ ಬ್ರಹ್ಮನನ್ನು ಪಡೆಯುತ್ತಾನೆ. ಐಕ್ಯತತ್ವಸಾಕ್ಷಾತ್ಕಾರ ಇರುವವನು ದೇಹ ಧರಿಸಿದಂತೆ ಕಾಣುವುದು. ಆದರೂ ಸಾಕ್ಷಾತ್ಕಾರದ ನಂತರವೇ ತನ್ನ ಸಹಜವಾದ ಚೈತನ್ಯರೂಪದ ಆವಿಷ್ಕಾರ ಪಡೆಯುವನು. ಏಕೆಂದರೆ, ಚೈತನ್ಯಾನುಭೂತಿಗೆ ವಿರೋಧಿಯಾದ ಯಾವ ಅಂಶಗಳೂ ಆಗ ಉಳಿದಿರುವುದಿಲ್ಲ. ಆದ್ದರಿಂದ ಐಕ್ಯತತ್ವ ಸಾಕ್ಷಾತ್ಕಾರವಾದೊಡನೆಯೇ ಜೀವನು ಸಹಜವಾದ ಬ್ರಹ್ಮತ್ವವನ್ನು ಪಡೆಯುವನು. ಶರೀರ ತೊರೆದ ಮೇಲಲ್ಲ.'

**ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ।** (4.4.6)

ವಿದ್ವಾನ್ ಸ ಇಹೈವ ಬ್ರಹ್ಮಾಪ್ಯೇತಿ । ಯದ್ಯಪಿ ದೇಹವಾನಿವ ಲಕ್ಷ್ಯತೇ । ಸ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ । ಯಸ್ಮಾನ್ನ ಹಿ ತಸ್ಯಾಬ್ರಹ್ಮತ್ವಪರಿಚ್ಛೇದಹೇತವಃ ಕಾಮಾಃ ಸಂತಿ । ತಸ್ಮಾದಿಹೈವ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ । ನ ಶರೀರಪಾತೋತ್ತರಕಾಲಮ್ ॥ (ಪು. 917)

**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥** (ಕಾಠಕ. 2.2.1)

ಎಂಬ ಶ್ರುತಿವ್ಯಾಖ್ಯಾನದಲ್ಲೂ ಶಂಕರಾಚಾರ್ಯರು 'ಐಕ್ಯತತ್ವಸಾಕ್ಷಾತ್ಕಾರದ ನಂತರವೇ ಕರ್ಮಬಂಧನದ ವಿಮುಕ್ತಿಯಾಗುವುದಲ್ಲದೇ ಮತ್ತೆ ಇನ್ನೊಂದು ಶರೀರವನ್ನು ಧರಿಸುವುದಿಲ್ಲ' ಎಂದು ಸಮರ್ಥಿಸಿದ್ದಾರೆ-

**'ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ।'** (ಕಾಠಕ. 2.2.1)

'ಅನುಷ್ಠಾಯ' ಧ್ಯಾತ್ವಾ । ಧ್ಯಾತ್ವಾ ಹಿ ತಸ್ಯಾನುಷ್ಠಾನಂ ಸಮ್ಯಗ್ವಿಜ್ಞಾನಪೂರ್ವಕಮ್ । ಇಹೈವಾವಿದ್ಯಾಕೃತಕಾಮಕರ್ಮಬಂಧನೈರ್ವಿಮುಕ್ತೋ ಭವತಿ । ವಿಮುಕ್ತಶ್ಚ ಸನ್ ವಿಮುಚ್ಯತೇ। ಪುನಃ ಶರೀರಂ ನ ಗೃಹ್ಣಾತಿ ।

ಪ್ರಕೃತ ಶಂಕರಾಚಾರ್ಯರ ಎರಡು ಬಗೆಯ ವಾದಗಳೂ ವಿದ್ಯಾರ್ಥಿಗಳಿಗೆ ಗೊಂದಲ ಹುಟ್ಟಿಸುವುದು ಸಹಜ. ಅನುಭಾವಿಗಳಿಂದ ಉಪದೇಶ-ಗ್ರಂಥರಚನೆ-ಶಿಷ್ಯಸ್ವೀಕಾರ-ಬಿಕ್ಷಾಟನಾದಿ ವ್ಯವಹಾರಗಳನ್ನು ಸಮರ್ಥಿಸಲು ಜೀವನ್ಮುಕ್ತಿಯನ್ನು ಒಪ್ಪಬೇಕು. ಆದರೆ ತತ್ವಜ್ಞಾನದಿಂದ ಅಖಂಡವಾದ ಅಜ್ಞಾನವು ನಾಶವಾದ ನಂತರ ಜೀವನ್ಮುಕ್ತಿಯನ್ನು ಒಪ್ಪಲು ಸಾಧ್ಯವಾಗದು. ಈ ಎಲ್ಲ ಸಂಗತಿಗಳನ್ನೂ ವನಮಾಲಿ ಮಿಶ್ರರು ಸುಂದರವಾಗಿ ತಿಳಿಸಿದ್ದಾರೆ-

**ಕರ್ಮದೇಹೇಂದ್ರಿಯಾದೀನಾಮವಿದ್ಯಾಕಾರ್ಯತಾಮತೇ ।**
**ನಾವಿದ್ಯಾಯಾ ವಿನಾಶೇ ಹಿ ಸ್ಥಿತಿರ್ಯುಕ್ತಾ ಕಥಂಚನ ॥** (2.95)

ಶ್ರೀರಾಮಾನುಜಾಚಾರ್ಯರು ಶ್ರೀಭಾಷ್ಯದಲ್ಲಿ ಪ್ರಾರಬ್ಧಕರ್ಮದ ಬಲಿಷ್ಠತೆಯ ಹಿನ್ನೆಲೆಯಲ್ಲಿ ಆ ದೇಹದ ಅವಸಾನದ ನಂತರ ಅಥವಾ ಪ್ರಾರಬ್ಧಕರ್ಮಕ್ಕನುಗುಣವಾಗಿ ಅನೇಕ ಶರೀರಗಳ ಪರಿತ್ಯಾಗ (ಕರ್ಮಭೋಗದ) ನಂತರ ಮುಕ್ತಿಯನ್ನು ಸಮರ್ಥಿಸಿದ್ದಾರೆ-

**ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ ।**

'ಇತರೇ- ಆರಬ್ಧಕಾರ್ಯೇ ಪುಣ್ಯಪಾಪೇ ಸ್ವಾರಬ್ಧಭೋಗೇನ ಕ್ಷಪಯಿತ್ವಾ ತತ್ಫಲ-ಭೋಗಸಮಾಪ್ತ್ಯನಂತರಂ ಬ್ರಹ್ಮ ಸಂಪದ್ಯತೇ । ತೇ ಚ ಪುಣ್ಯಪಾಪೇ ಏಕಶರೀರೋಪ-ಭೋಗ್ಯಫಲೇ ಚೇತ್, ತಚ್ಛರೀರಾವಸಾನೇ ಸಂಪದ್ಯತೇ ಅನೇಕಶರೀರೋಪಭೋಗ್ಯಫಲೇ ಚೇತ್, ತದವಸಾನೇ ಸಂಪದ್ಯತೇ, ಭೋಗೇನೈವ ಚ ಕ್ಷಪಯಿತವ್ಯತ್ವಾದಾರಬ್ಧಫಲಯೋಃ ಕರ್ಮಣೋಃ । "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ' ಇತಿ ಚ ಭೋಗೇನ ತಯೋಃ ಕರ್ಮಣೋರ್ವಿಮೋಕ್ಷ ಉಚ್ಯತೇ ದೇಹಾವಧಿನಿಯಮಶ್ರವಣಾತ್ ।'

(ಶ್ರೀಭಾಷ್ಯಮ್ 4. 19)

ಪ್ರಪತ್ತಿಮಾರ್ಗಾವಲಂಬಿಗಳಿಗೆ ಪ್ರಾರಬ್ಧಕರ್ಮ ಬಾಧಕವಾಗಲೀ ಬಂಧಕವಾಗಲೀ ಆಗಲಾರದು. ಪ್ರಪತ್ತಿಮಾರ್ಗವನ್ನು ಅವಲಂಬಿಸಿದ ಸಾಧಕನಿಗೆ ಆ ದೇಹವನ್ನು ತೊರೆದ ಕೂಡಲೇ ಮುಕ್ತಿಯಾಗುವುದು. ಅನೇಕ ಶರೀರಗಳನ್ನು ಎತ್ತುವ ಪ್ರಸಂಗವಿಲ್ಲ ಎಂಬ ವಾದ ಪ್ರಪನ್ನಪಾರಿಜಾತ-ವೈಷ್ಣವಮತಾಬ್ಜಭಾಸ್ಕರ-ಸಿದ್ಧಾಂತಸಾರ-ನ್ಯಾಯಸಿದ್ಧಾಂಜನ ಮೊದಲಾದ ಕೃತಿಗಳಲ್ಲಿ ಮಂಡಿಸಲ್ಪಟ್ಟಿದೆ-

**ಸಾಧನಂ ಭಗವತ್ಪ್ರಾಪ್ತೌ ಸಾ ಏವೇತಿ ಸ್ಥಿರಾ ಮತಿಃ ।**
**ಸಾಧ್ಯಭಕ್ತಿಸ್ತಥಾ ಸೈವ ಪ್ರಪತ್ತಿರಿತಿ ಗೀಯತೇ ।**

**ಉಪಾಯಭಕ್ತಿಃ ಪ್ರಾರಬ್ಧವ್ಯತಿರಿಕ್ತಾಘನಾಶಿನೀ ।**
**ಸಾಧ್ಯಭಕ್ತಿಸ್ತು ಸಾ ಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ ॥**

ಈ ಚಿಂತನೆಯು 'ತಸ್ಯ ತಾವದೇವ ಚಿರಂ' ಎಂಬ ಬೃಹದಾರಣ್ಯಕಶ್ರುತಿಗೆ ಅತ್ಯಂತ ವಿರುದ್ಧವಾಗಿದೆ. ಪ್ರಾರಬ್ಧಕರ್ಮವು ಪ್ರಾಯಃ ಉತ್ತಮಾಧಿಕಾರಿಗಳಿಗೆ ದೀರ್ಘಕಾಲವೇ ಇರುತ್ತದೆಂಬುದು ಅನೇಕ ಪ್ರಮಾಣಗಳಿಂದ ಸಿದ್ಧವಿದೆ.

**'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಮ್ ।'**
(ಭಾಗವತ 2-4)

**ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ ।**
**ಅನ್ಯೇಷಾಂ ಬ್ರಹ್ಮಮಾತ್ರಸ್ಯ ತ್ವಂತ ಆರಬ್ಧಸಂಕ್ಷಯಃ ।**
**ಬ್ರಹ್ಮಣೈವ ಸಹಾತಶ್ಚ ಪರಂ ನಾರಾಯಣಂ ವ್ರಜೇತ್ ॥**
(ಬ್ರಹ್ಮಸೂತ್ರಾನುವ್ಯಾಖ್ಯಾನ ಉದಾಹೃತ ಸತ್ತತ್ವವಚನ 4. 1. 15)

**ಕರ್ಮಾಣಿ ಕ್ಷಪಯೇದ್ ವಿಷ್ಣುರಪ್ರಾರಬ್ಧಾನಿ ವಿದ್ಯಯಾ ।**
**ಪ್ರಾರಬ್ಧಾನಿ ತು ಭೋಗೇನ ಕ್ಷಪಯನ್ ಸ್ವಗತಿಂ ನಯೇತ್ ॥** (ನ್ಯಾಯವಿವರಣ 4. 1. 15)

ಜೀವಸ್ವರೂಪದಲ್ಲಿ ತಾರತಮ್ಯ ಒಪ್ಪದ ರಾಮಾನುಜೀಯರು, ಅಲ್ಪಾಧಿಕಾರಿಗಳಿಗೆ ಆ ದೇಹದ ಕೊನೆಯಲ್ಲಿಯೇ ಮುಕ್ತಿ ಸಂಭವಿಸಬಹುದೆಂದು ಪರಿಹಾರವನ್ನು ನೀಡಲು ಸಾಧ್ಯವಿಲ್ಲ.

ಈ ಹಿನ್ನೆಲೆಯಲ್ಲಿ ಪ್ರಾರಬ್ಧಕರ್ಮವು, ಆನಂದದ ಉನ್ನತಿಗೆ ತಕ್ಕಂತೆ, ಸಾಧನದ ಹೆಚ್ಚಳ ಮತ್ತು ಪ್ರಾರಬ್ಧಕರ್ಮಗಳ ವಿಲಂಬಗತಿಯನ್ನೂ ಅಪೇಕ್ಷಿಸುತ್ತದೆ.

ಪ್ರಕೃತ ವಿಷಯದ ವಿಮರ್ಶೆಯಲ್ಲಿ ಅದ್ವೈತದ ಸೂಕ್ಷ್ಮ ವಿಮರ್ಶೆ ವನಮಾಲಿಗಳ ಕೃತಿಯಲ್ಲಿ ಸುಂದರವಾಗಿ ಮೂಡಿ ಬಂದಿದೆ.

**ಪಂಚರಾತ್ರಾಗಮದ ಶ್ರೇಷ್ಠತೆ :**

ಈ ಕೃತಿಯಲ್ಲಿ ಕಾಣಬರುವ ಮತ್ತೊಂದು ಗಮನಾರ್ಹ ವಿಷಯ- ಪಂಚರಾತ್ರದ ಶ್ರೈಷ್ಠ್ಯ ಸಮರ್ಥನೆ. ಅದ್ವೈತಿಗಳು ಹಾಗೂ ಕೆಲವು ರಾಮಾನುಜೀಯರು 'ವಾಸುದೇವಾದ್ ಜೀವೋ ಜಾಯತೇ' ಇತ್ಯಾದಿವಾಕ್ಯಗಳ ಮೇಲುನೋಟದ ಅರ್ಥವನ್ನು ಪರಿಗ್ರಹಿಸಿ, ವಾಸುದೇವನಿಂದ ನಿತ್ಯನಾದ ಜೀವನಿಗೆ ಜನ್ಮ ಸಾಧ್ಯವಿಲ್ಲವಾದ ಕಾರಣ ಈ ಪಾಂಚರಾತ್ರ ಭಾಗವು ಅಪ್ರಾಮಾಣಿಕ ವೆನ್ನುತ್ತಾರೆ. ಆದರೆ ವಸ್ತುನಿಷ್ಠವಾಗಿ ವಿಮರ್ಶಿಸಿದರೆ ಇಲ್ಲಿ ವಾಸುದೇವನಿಂದ ಜೀವನು ಜನಿಸಿದನೆಂದರೆ ಸಂಕರ್ಷಣರೂಪವು ವ್ಯಕ್ತವಾಯಿತೆಂದು ತಿಳಿಯಬೇಕು. ಇದರಂತೆ 'ಮನಃ' ಶಬ್ದವು ಮನಸ್ಸನ್ನು ನಿಯಂತ್ರಿಸುವ ಪ್ರದ್ಯುಮ್ನನನ್ನು ಪ್ರತಿಪಾದಿಸುತ್ತದೆ.

ಪ್ರದ್ಯುಮ್ನನಿಂದ ಅನಿರುದ್ಧರೂಪ ವ್ಯಕ್ತವಾಗುವುದು. ಹೀಗೆ ಪಂಚರೂಪಾತ್ಮಕನಾದ ಪರಮಾತ್ಮನ ಅಭಿವ್ಯಕ್ತಿ ಹಾಗೂ ಅವನಿಂದ ಆಗುವ ವಿಶ್ವಸೃಷ್ಟಿ ಇತ್ಯಾದಿ ಮಹಿಮೆಯು ಅತ್ಯಂತ ಮನೋಜ್ಞವಾಗಿ ಪಾಂಚರಾತ್ರದಲ್ಲಿ ವರ್ಣಿಸಲ್ಪಟ್ಟಿದೆ. ಕೇವಲ ಹರಿಮಹಿಮೆಯ ವರ್ಣನೆಗೆ ನಾರಾಯಣನಿಂದ ಉಪದೇಶಿಸಲ್ಪಟ್ಟ ಹಿನ್ನೆಲೆಯಲ್ಲಿ ಪಾಂಚರಾತ್ರಕ್ಕೆ ಹೆಚ್ಚಿನ ಮಹತ್ವವಿದೆ. ಉತ್ಪತ್ತ್ಯಧಿಕರಣದ ಅನುವ್ಯಾಖ್ಯಾನ ಮತ್ತು ಸುಧೆಯಲ್ಲಿ ಪಂಚರಾತ್ರಪ್ರಾಮಾಣ್ಯಸಮರ್ಥನೆಯ ಚರ್ಚೆ ಇದೆ. ಇದರ ಸಾರಸಂಗ್ರಹವನ್ನು ಶ್ರೀ ವನಮಾಲಿಗಳು ಪಾಂಚರಾತ್ರವಾಕ್ಯಗಳನ್ನು ಉದಾಹರಿಸಿ ಈ ಕೃತಿಯಲ್ಲಿ ನೀಡಿದ್ದಾರೆ-

**ಸ ವಾಸುದೇವೋ ವಿಜ್ಞೇಯಃ ಪರಮಾತ್ಮಾ ಸನಾತನಃ ।**
**ನ ಚ ಜೀವಂ ವಿನಾ ಬ್ರಹ್ಮನ್ ವಾಯವಶ್ಚೇಷ್ಟಯಂತ್ಯುತ ॥**
**ಸ ಮನಃ ಸರ್ವಭೂತಾನಾಂ ಪ್ರದ್ಯುಮ್ನಃ ಪರಿಪಠ್ಯತೇ ।**
**ತಸ್ಮಾತ್ ಪ್ರಸೂತೇ ಯಃ ಕರ್ತಾ ಕಾರಣಂ ಕಾರ್ಯಮೇವ ಚ ॥**
**ತಸ್ಮಾತ್ ಸರ್ವಂ ಸಂಭವತಿ ಜಗತ್‌ಸ್ಥಾವರಜಂಗಮಮ್ ।**
**ಸೋಽನಿರುದ್ಧಃ ಸ ಈಶಾನೋ ವ್ಯಕ್ತಃ ಸರ್ವೇಷು ಕರ್ಮಸು ॥**
**ಯೋ ವಾಸುದೇವೋ ಭಗವಾನ್ ಕ್ಷೇತ್ರಜ್ಞೋ ನಿರ್ಗುಣಾತ್ಮಕಃ ।**
**ಜ್ಞೇಯಃ ಸ ಏವ ರಾಜೇಂದ್ರ ಜೀವಃ ಸಂಕರ್ಷಣಃ ಪ್ರಭುಃ ॥**
**ಸಂಕರ್ಷಣಾಚ್ಚ ಪ್ರದ್ಯುಮ್ನೋ ಮನೋಭೂತಃ ಸ ಉಚ್ಯತೇ ।**
**ಪ್ರದ್ಯುಮ್ನಾಚ್ಚಾನಿರುದ್ಧಃ ಸ ಈಶ್ವರಃ ಪ್ರಭುರವ್ಯಯಃ ॥** (4.23-27)

**ವಿಶೇಷ ಸಮರ್ಥನೆ :**

ಮಧ್ವಸಿದ್ಧಾಂತದ ಮುಖ್ಯ ಪ್ರಮೇಯಗಳಲ್ಲಿ ಒಂದಾದುದು 'ವಿಶೇಷ'. ಎಲ್ಲಿ ಅಭೇದವು ಪ್ರಮಾಣಸಿದ್ಧವಾಗಿದ್ದು ಭೇದವ್ಯವಹಾರವು ಕಾಣಬರುವುದೋ ಅಲ್ಲಿ, ಭೇದವ್ಯವಹಾರವನ್ನು ನಿರ್ವಹಿಸಲು ಕಾರಣವಾದ ಶಕ್ತಿವಿಶೇಷವನ್ನು ಆಯಾ ಪದಾರ್ಥದಲ್ಲಿ ಒಪ್ಪಬೇಕಾಗುವುದು. ಇಂತಹ ಭೇದವ್ಯವಹಾರಗಳ ಸಂಖ್ಯೆಗಳಿಗೆ ಅನುಗುಣವಾಗಿ ಒಂದೇ ವಸ್ತುವಿನಲ್ಲಿ ಅನೇಕ ವಿಶೇಷಗಳನ್ನು ಒಪ್ಪಬೇಕಾಗುವುದು. ಈ ವಿಶೇಷವು ವಸ್ತುವಿನಿಂದ ಅಭಿನ್ನವಾಗಿರುತ್ತದೆ. 'ವಸ್ತುವಿನಿಂದ ಅಭಿನ್ನವಾದ ವಿಶೇಷದ ಬಗೆಯೂ, 'ವಸ್ತುವಿನಲ್ಲಿ ವಿಶೇಷವು ಇದೆ' ಎಂಬ ಭೇದವ್ಯವಹಾರವನ್ನು ನಿರ್ವಹಿಸಲು ಮತ್ತೊಂದು ವಿಶೇಷವನ್ನು ಒಪ್ಪಬೇಕಾಗುವುದು. ಹೀಗೆ ವಿಶೇಷಪರಂಪರೆಯಿಂದ ಅನವಸ್ಥಾದೋಷ ಬರಲಾರದೆ?' ಎಂಬ ಶಂಕೆಯು ಇಲ್ಲಿ ಸಹಜ. ಆದರೆ, ವಿಶೇಷವು ಸ್ವನಿರ್ವಾಹಕವಾದ ಕಾರಣ ಭೇದವ್ಯವಹಾರಕ್ಕಾಗಿ ಬೇರೊಂದು ವಿಶೇಷವನ್ನು ಅವಲಂಬಿಸುವುದಿಲ್ಲ.

ಇಂತಹ ವಿಶೇಷವನ್ನು ಪರಮಾತ್ಮನಲ್ಲೂ ಗುಣ-ಗುಣಿಭಾವವನ್ನು ಸಮರ್ಥಿಸಲು ಒಪ್ಪಬೇಕು.

ಇನ್ನೊಬ್ಬರ ಪ್ರಯೋಜನಕ್ಕಾಗಿ, ಆನಂದಪೂರ್ಣನಾದ ಶ್ರೀಹರಿಯು ಈ ವಿಶ್ವವನ್ನು ನಿರ್ಮಿಸಿದ್ದಾನೆ. ಅವನೇ ಆನಂದನೂ ಅಹುದು. ಆನಂದವೇ ಮೊದಲಾದ ಗುಣಗಳಿಮದ ಪೂರ್ಣನೂ ಅಹುದು. ಗುಣ ಹಾಗೂ ಗುಣಿಗಳಲ್ಲಿ ಭೇದವಿಲ್ಲದಿರುವಾಗ ಭೇದವ್ಯವಹಾರವು 'ವಿಶೇಷ'ದ ಮೂಲಕವೇ ಸಂಭವಿಸಿದೆ ಎಂಬ ಉತ್ತರವೂ ಅನಿವಾರ್ಯ.

'ವಿಜ್ಞಾನಮಾನಂದಂ ಬ್ರಹ್ಮ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ ಶ್ರುತಿಯು ಹರಿಯೇ ಜ್ಞಾನಾನಂದಾದಿರೂಪನೆಂದು ಅವನಿಗೂ ಅವನ ಗುಣಗಳಿಗೂ ಅಭೇದವನ್ನು ಸಮರ್ಥಿಸುತ್ತಿದೆ. 'ಆನಂದಂ ಬ್ರಹ್ಮಣಃ', 'ಯಃ ಸರ್ವಜ್ಞಃ' ಎಂಬುದಾಗಿ ಗುಣಗಳುಳ್ಳವನೆಂಬುದಾಗಿ ಶ್ರೀಹರಿಗೂ ಅವನಲ್ಲಿರುವ ಗುಣಗಳಿಗೂ ಭೇದವನ್ನೂ ಹೇಳುತ್ತಿದೆ. ಇದರಂತೆ 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬುದಾಗಿ ಶ್ರೀಹರಿಗೂ ಅವನ ಧರ್ಮಗಳಿಗೂ ಭೇದವನ್ನು ಚಿಂತಿಸುವವನಿಗೆ ನಿತ್ಯನರಕಪ್ರಾಪ್ತಿಯನ್ನು ತಿಳಿಸಿ ಭೇದದರ್ಶನವನ್ನು ಖಂಡಿಸಿದೆ. ಶ್ರೀಹರಿಯಲ್ಲಿರುವ ಧರ್ಮಗಳು ಅವನಿಂದ ಅಭಿನ್ನವಾದರೆ 'ಧರ್ಮ-ಧರ್ಮಿಭಾವ'ವು ಉಪಪನ್ನವಾಗಲಾರದು. ಸತ್ಯ-ಜ್ಞಾನಾದಿಪದಗಳು ಒಂದೇ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ ಕಾರಣ ಗುಣ-ಗುಣಿಗಳಲ್ಲಿ ಅಭೇದ ಒಪ್ಪಿದ ಕಾರಣ ಪದಗಳಿಗೆ ಪರ್ಯಾಯತ್ವ ದೋಷವು ಸಂಭವಿಸುವುದು. ಈ ಎರಡೂ ದೋಷಗಳು ವಿಶೇಷವನ್ನು ಒಪ್ಪಿದಾಗ ಪರಿಹೃತವಾಗುವವು. ವಿಶೇಷವು ಧರ್ಮ-ಧರ್ಮಿಗಳಲ್ಲಿ ಅಭೇದವಿದ್ದರೂ ಭೇದವ್ಯವಹಾರವನ್ನು ಉಪಪಾದಿಸುತ್ತದೆ. ಹಾಗೆಯೇ ಜ್ಞಾನಾನಂದಾದಿ ಗುಣಗಳು ಹರಿಯಿಂದ ಅಭಿನ್ನವಾದರೂ, ನಿರ್ವಿಶೇಷಾಭೇದವನ್ನೂ ಒಪ್ಪದ ಕಾರಣ ವಿಶೇಷಶಕ್ತಿಯ ಮೂಲಕ 'ಜ್ಞಾನ'- 'ಆನಂದ' ಇತ್ಯಾದಿಯಾಗಿ ಭೇದವ್ಯವಹಾರವನ್ನು ಸಮರ್ಥಿಸಬಹುದು.

**ಅದ್ವೈತಿಗಳು ಹಾಗೂ ಎಲ್ಲ ದಾರ್ಶನಿಕರೂ ವಿಶೇಷವನ್ನು ಒಪ್ಪಬೇಕು :**

ಮಾಯಾವಾದಿಗಳೂ ವಿಶೇಷವನ್ನು ಒಪ್ಪುವುದು ಅನಿವಾರ್ಯ. 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ವೇದವಾಕ್ಯಗಳು ಹೇಳುವಂತೆ ಬ್ರಹ್ಮನಿಗೂ ಅವನ ಗುಣಗಳಿಗೂ ಅಭೇದವನ್ನು ಅದ್ವೈತಿಗಳೂ ಒಪ್ಪುವರು. ಪರಬ್ರಹ್ಮನು ನಿರ್ಗುಣನು. ಇಂತಹ ನಿರ್ವಿಶೇಷಚೈತನ್ಯವನ್ನು ಲಕ್ಷಣಾವೃತ್ತಿಯಿಂದ ಸತ್ಯಜ್ಞಾನಾದಿಪದಗಳು ಬೋಧಿಸುತ್ತವೆ ಎಂಬುದು ಅದ್ವೈತವಾದ. ಪ್ರವೃತ್ತಿನಿಮಿತ್ತ ಭೇದವಿಲ್ಲದ ಎಲ್ಲ ಪದಗಳಿಂದ ಬ್ರಹ್ಮನು ಲಕ್ಷಿತವಾದಾಗ ಸತ್ಯ ಜ್ಞಾನ ಮೊದಲಾದ ಪದಗಳಿಗೆ ಪರ್ಯಾಯತ್ವವು ಅಪರಿಹಾರ್ಯ. ಇದರಂತೆ ವಿಶ್ವದ ಭ್ರಮೆಗೆ ಆಶ್ರಯವಾದ (ಅಧಿಷ್ಠಾನವಾದ) ಚೈತನ್ಯದ ಅರಿವು ಈಗ 'ನಾನು' ಎಂಬುದಾಗಿ ಇರುವುದಾದರೂ, ಚೈತನ್ಯದಿಂದ ಅಭಿನ್ನವಾದ ಆನಂದದ ಅರಿವು ಅಥವಾ ಅನುಭವ ಆಗದಿರುವುದನ್ನು ಉಪಪಾದಿಸಲು ವಿಶೇಷವನ್ನು ಒಪ್ಪಬೇಕಾಗುತ್ತದೆ.

ಇಲ್ಲಿ ಹೀಗೆ ಪೂರ್ವಪಕ್ಷವನ್ನು ಮಂಡಿಸಬಹುದಾಗಿದೆ-

''ಸತ್ಯತ್ವಾದಿ ವಿಶೇಷಣಗಳು ಮಾಯಾಕಲ್ಪಿತನಾದ ಸಗುಣಬ್ರಹ್ಮನನ್ನು ಬೋಧಿಸುತ್ತವೆ. ಸತ್ಯಪದ ಹಾಗೂ ಜ್ಞಾನಪದಗಳು ಭಿನ್ನಾರ್ಥವನ್ನು ತಿಳಿಸುವುದರ ಹಿನ್ನೆಲೆಯಲ್ಲಿ ಪ್ರವೃತ್ತಿನಿಮಿತ್ತ ಭೇದವಿದೆ. ಅಖಂಡ (ನಿರ್ವಿಶೇಷ) ಚೈತನ್ಯವು ಸತ್ಯ-ಜ್ಞಾನಾದಿ ಪದಗಳಿಂದ ಲಕ್ಷ್ಯವಾಗಿದೆ. (ಲಕ್ಷಣಾವೃತ್ತಿಯಿಂದ ಬೋಧಿತವಾಗಿದೆ.) ಸತ್ಯ-ಜ್ಞಾನಾದಿ ಪದಗಳು, ಚೈತನ್ಯವು, 'ಅಸತ್ಯವಲ್ಲ, ಜಡವಲ್ಲ' ಎಂದು ಬೋಧಿಸುವ ಕಾರಣ ಆ ಪದಗಳಿಗೆ ಪರ್ಯಾಯತ್ವವಾಗಲೀ ವೈಯರ್ಥ್ಯವಾಗಲೀ ಇರುವುದಿಲ್ಲ''

ಈ ವಾದವು ಸಮಂಜಸವಲ್ಲ-

ಗಂಗಾಪದಲಕ್ಷ್ಯವಾದ ತೀರವು ಹೇಗೆ ಗಂಗೆ ಎಂಬ ಶಬ್ದದಿಂದ ಕರೆಸಿಕೊಳ್ಳಲ್ಪಡುವುದಿಲ್ಲವೋ ಮತ್ತು ಅದು ಹೇಗೆ ಗಂಗೆಯಲ್ಲವೋ ಹಾಗೆಯೇ ಸತ್ಯ-ಜ್ಞಾನಾದಿ ಪದಗಳಿಂದ ಲಕ್ಷ್ಯವಾದ ಚೈತನ್ಯವೂ ಸತ್ಯವೆನಿಸದೆಯೇ ಅಸತ್ಯವೂ-ಜಡವೂ-ಮಿತಿಯುಳ್ಳದ್ದೂ ಆಗಬೇಕಾಗುವುದು.

ಸತ್ಯ-ಜ್ಞಾನಾದಿ ಪದಗಳು ಲಕ್ಷಣಾವೃತ್ತಿಯಿಂದ ಚೈತನ್ಯವನ್ನು ಬೋಧಿಸುತ್ತವೆ ಎಂಬ ವಾದದಲ್ಲಿ ಯಾವುದೇ ಪದವೂ ಹಿಂದಿನ ಪದಕ್ಕಿಂತ ಹೆಚ್ಚಿನ ಅಂಶವನ್ನು ಚೈತನ್ಯದಲ್ಲಿ ಬೋಧಿಸದ ಕಾರಣ ಅನೇಕ ಪದಗಳ ವೈಯರ್ಥ್ಯವು ಅಪರಿಹಾರ್ಯವಾಗಿದೆ.

'ತತ್ವಮಸಿ' ಎಂಬ ವಾಕ್ಯದಿಂದ ಬೋಧಿಸಲ್ಪಡುವ ವಾಕ್ಯಾರ್ಥವಾದ ಐಕ್ಯವು ಚೈತನ್ಯಸ್ವರೂಪದಿಂದ ಭಿನ್ನವೇ? ಅಭಿನ್ನವೇ? ಭಿನ್ನಾಭಿನ್ನವೇ? ಎಂಬ ಪ್ರಶ್ನೆ ಮಾಡಬಹುದಾಗಿದೆ. ಭಿನ್ನವಾದರೆ, ಬ್ರಹ್ಮಭಿನ್ನವಾದುದು ಮಿಥ್ಯೆಯಾದ ಕಾರಣ, ಚೈತನ್ಯದಿಂದ ಭಿನ್ನವಾದ ಐಕ್ಯವೂ ಮಿಥ್ಯೆಯಾಗುವುದು ಅನಿವಾರ್ಯ. ಐಕ್ಯವು ಚೈತನ್ಯದಿಂದ ಅಭಿನ್ನವಾದರೆ, ಸ್ವಪ್ರಕಾಶವಾದ ಚೈತನ್ಯದಿಂದ ಅಭಿನ್ನವಾದ ಐಕ್ಯದ ಪ್ರಕಾಶವಾಗದಿರಲು ಕಾರಣವಿಲ್ಲ. ವಿಶೇಷತತ್ತ್ವವನ್ನು ಒಪ್ಪದಿರುವಲ್ಲಿ ಚೈತನ್ಯದ ಪ್ರಕಾಶ ಮತ್ತು ಐಕ್ಯದ ಅಪ್ರಕಾಶಗಳನ್ನು ಉಪಪಾದಿಸಲು ಸಾಧ್ಯವಾಗಲಾರದು. ವಿಶೇಷವನ್ನು ಒಪ್ಪಿದರೆ, ಚೈತನ್ಯ-ಐಕ್ಯಗಳು ಅಭಿನ್ನವಾದರೂ, ಚೈತನ್ಯವು ತೋರಿ ಐಕ್ಯವು ತೋರದಿರಬಹುದೆಂದು ಉತ್ತರವನ್ನು ನೀಡಬಹುದು.

ಇದರಂತೆಯೇ ನಿರಪೇಕ್ಷವಾದ ಚೈತನ್ಯಕ್ಕೂ ಸಾಪೇಕ್ಷವಾದ ಐಕ್ಯಕ್ಕೂ ಅಭೇದವನ್ನು ಹೇಳುವುದು, ಹಾಗೂ ಚೈತನ್ಯವು ತೋರಿದರೂ ಐಕ್ಯವು ಭಾಸವಾಗಲಾರದೆಂಬ ವಾದವು ಸಮಂಜಸವಾಗಲಾರದು. ವಿಶೇಷವನ್ನು ಒಪ್ಪದೆಯೇ ಈ ವಾದವನ್ನು ಸಮರ್ಥಿಸಲು ಸಾಧ್ಯವಿಲ್ಲ.

ಇದರಂತೆ 'ಸಮವಾಯವು ಸಂಬಂಧವಾಗಿದೆ' 'ಸತ್ತಾ (ಅಸ್ತಿತ್ವವು) ಇದೆ' 'ಭೇದವು ಭಿನ್ನವಾಗಿದೆ' 'ಕಾಲವು ಯಾವಾಗಲೂ ಇದೆ' 'ದೇಶವು (ಆಕಾಶವು) ಎಲ್ಲೆಡೆ ಇದೆ' ಇವೇ ಮೊದಲಾದ ಧರ್ಮ-ಧರ್ಮಿಗಳ ನಡುವಿನ ಭೇದವ್ಯವಹಾರಗಳನ್ನು ವಿಶೇಷವನ್ನು ಒಪ್ಪದೆಯೇ ಸಮರ್ಥಿಸಲು ಸಾಧ್ಯವಾಗದು.

ಹೀಗೆ ಮಾಧ್ವಮತದ ವಿಶಿಷ್ಟಪ್ರಮೇಯವಾದ 'ವಿಶೇಷ'ದ ಬಗ್ಗೆ ಸುಂದರ ವಿವರಣೆ ಇಲ್ಲಿದೆ-

ಸಚ್ಚಿದಾನಂದರೂಪೋಽಸೌ ತದ್ಗುಣಕಸ್ತಥಾ ವಿಭುಃ ।
ತಸ್ಯ ಗುಣಾದ್ಯಭೇದೇಽಪಿ ವಿಶೇಷೋ ವರ್ತತೇ ಸದಾ ॥
ಭೇದಪ್ರತಿನಿಧಿಃ ಸ ಸ್ಯಾತ್ ವ್ಯವಹಾರಸ್ಯ ಸಾಧಕಃ । (5. 3, 4)
ಕೇಚಿದ್ ಭೇದಂ ಹಿ ವಾಂಛಂತಿ ಗುಣಗುಣ್ಯಾದಿವಸ್ತುನಃ ॥

ಇದರಂತೆ ಈ ಕೃತಿಯಲ್ಲಿ ಬರುವ, ಬ್ರಹ್ಮನು ವಿಶ್ವಕ್ಕೆ ನಿಮಿತ್ತಕಾರಣನೂ ಅಹುದು ಉಪಾದಾನಕಾರಣನೂ ಅಹುದೆಂಬ ವಾದದ ವಿಮರ್ಶೆ- ವಿಶ್ವಕಾರಣನಾದ ಬ್ರಹ್ಮನೇ ಶುದ್ಧ ಹಾಗೂ ವಾಚ್ಯ- ಮಾಯಾವಾದ-ಶೂನ್ಯವಾದ ಪ್ರಕ್ರಿಯಾ ಸಾಮ್ಯ ವಿಚಾರಗಳು ಚೇತೋಹಾರಿಯಾಗಿ ವರ್ಣಿಸಲ್ಪಟ್ಟಿವೆ.

**ಮಯಟ್ ವಿಕಾರಾರ್ಥಕವಲ್ಲ :**

ತೈತ್ತಿರೀಯೋಪನಿಷತ್ತಿನಲ್ಲಿ ಬರುವ ಅನ್ನಮಯನಿಂದ ಆರಂಭಿಸಿ ಆನಂದಮಯನ ವರೆಗೆ ಎಲ್ಲ ಭಗವದ್ರೂಪಗಳ ಪ್ರತಿಪಾದನೆ ಇದೆ. ಇಲ್ಲಿ ಮಯಟ್ ಪ್ರತ್ಯಯವು ಪ್ರಾಚುರ್ಯ (ಪೂರ್ಣ) ಎಂಬ ಅರ್ಥವನ್ನು ಹೊಂದಿದ್ದು ವಿಕಾರಾರ್ಥಕವಲ್ಲ ಎಂಬುದು ದ್ವೈತಸಿದ್ಧಾಂತದ ನಿಲುವು. ಇದನ್ನು ಸಮರ್ಥಿಸುವ ವನಮಾಲಿಗಳ ಕ್ರಮ ಗಮನಾರ್ಹವಾಗಿದೆ-

ಮಯಟ್‌ಪ್ರತ್ಯಯಕ್ಕೆ ಪ್ರಕೃತ ಪ್ರಾಚುರ್ಯಾರ್ಥವನ್ನು ಒಪ್ಪುವುದೇ ಸೂಕ್ತ. ವಿಕಾರಾರ್ಥಕವೆನ್ನುವುದು ಸಾಹಸ. 'ಮಯಟ್ ವೈತಯೋರ್ಭಾಷಾಯಾಮ್' ಎಂಬಲ್ಲಿ ಲೋಕದಲ್ಲಿ ಬಳಸುವ ಮಯಟ್ ಪ್ರತ್ಯಯದಿಂದ ಕೂಡಿದ ಪದಗಳಲ್ಲಿರುವ 'ಮಯಟ್'ಗೆ ವಿಕಾರಾರ್ಥತ್ವವನ್ನೂ ಹೇಳುವುದನ್ನು ವ್ಯಾಕರಣಶಾಸ್ತ್ರ ಒಪ್ಪಿದೆಯಲ್ಲದೇ, ವೈದಿಕ ಮಯಟ್ ಪ್ರತ್ಯಯಘಟಿತ ಪದಗಳಿಗಲ್ಲ. ಅಲ್ಲಿಯೂ ಎರಡು 'ಅಚ್'ಗಳಿರುವ ಪದದಲ್ಲಿರುವ 'ಮಯಟ್'ಗೆ ವಿಕಾರಾರ್ಥಕತ್ವವನ್ನು ಹೇಳಬಹುದಾದರೂ, ಮೂರು ಅಚ್‌ಗಳಿರುವ ವಿಜ್ಞಾನಮಯ ಹಾಗೂ ಆನಂದಮಯಪದಗಳಲ್ಲಿರುವ ಮಯಟ್‌ಪ್ರತ್ಯಯಕ್ಕೆ ವಿಕಾರಾರ್ಥವನ್ನು ಹೇಳುವುದು 'ದ್ವ್ಯಚಶ್ಛಂದಸಿ' (ಅಷ್ಟಾ. 5. 3. 150) ಎಂಬ ಪಾಣಿನೀಯ ಸೂತ್ರಕ್ಕೆ ವಿರುದ್ಧವಾಗಿದೆ. ಇಂತಹ ಅನೇಕ ವ್ಯಾಕರಣಶಾಸ್ತ್ರದ ವಿಷಯಗಳು ಪ್ರಾಸಂಗಿಕವಾಗಿ ಇಲ್ಲಿ ಬಂದಿವೆ. ಸಿದ್ಧಾಂತಸಮರ್ಥನೆಗಾಗಿ ವ್ಯಾಕರಣಶಾಸ್ತ್ರಸಮ್ಮತಿಯನ್ನೂ ತೋರಿಸಿ

ವ್ಯಾಖ್ಯಾನಿಸುವ ಶ್ರೀ ವನಮಾಲಿಗಳ ಕೌಶಲ ಅಪೂರ್ವವಾಗಿದೆ.

ಇಂತಹ ನೂರಾರು ಅಪೂರ್ವ ಸೂಕ್ಷ್ಮ ವಿಷಯಗಳ ಆಕರ ಈ ಕೃತಿಯಾಗಿದೆ. ಶ್ರುತಿಗಳ ಸಂಕ್ಷಿಪ್ತ ವಿವರಣೆ ಇಲ್ಲಿದೆ. ನ್ಯಾಯಾಮೃತದ ವಿಮರ್ಶಾಪದ್ಧತಿಯ ಕ್ರಮದ ಪ್ರಭಾವವನ್ನು ಶ್ರುತ್ಯರ್ಥವರ್ಣನೆಯಲ್ಲಿ ಕಾಣಬಹುದು. ನ್ಯಾಯಾಮೃತವು ಸರ್ವಗ್ರಾಹಿ ಹಾಗೂ ವಿಸ್ತೃತ. ಈ ಕೃತಿ ಅದರ ಕೆಲವು ಚಿಂತನೆಗಳನ್ನು ಉಪಜೀವಿಸಿ ಸಂಕ್ಷಿಪ್ತವಾಗಿ ಅವಶ್ಯ ವಿಜ್ಞೇಯ ತತ್ವಗಳನ್ನು ತಿಳಿಸಿಕೊಟ್ಟಿದೆ.

**ಪ್ರಕೃತ ಕೃತಿಯ ಬಗ್ಗೆ ಎರಡು ಮಾತು :**

60 ವರ್ಷಗಳ ಹಿಂದೆ ಮುದ್ರಿತವಾದ ಈ ಕೃತಿಯನ್ನು ನೋಡಿ, ಮರಳಿ ಶುದ್ಧಪಾಠದೊಂದಿಗೆ ಮುದ್ರಿಸುವ ಆಲೋಚನೆ ಮಾಡಿದೆ. ಆದಷ್ಟು ಶುದ್ಧ ಪಾಠ ನೀಡುವ ಪ್ರಯತ್ನ ಇಲ್ಲಿದೆ.

ನನ್ನ ಸಂಗ್ರಹದಲ್ಲಿರುವ ಈ ಕೃತಿಯ ಹಸ್ತಪ್ರತಿಯನ್ನಾಧರಿಸಿ ಪಾಠಾಂತರ ಹಾಕಲಾಗಿದೆ. ಹಿಂದೆ ಮುದ್ರಿತಪಾಠಕ್ಕೆ 'ಕ' ಎಂಬ ಹೆಸರು ನೀಡಲಾಗಿದೆ. ಈಗಿನ ಹಸ್ತಕೋಶ ಪಾಠಕ್ಕೆ 'ಖ' ಸಂಜ್ಞೆ ನೀಡಲಾಗಿದೆ. ಈ ಕೃತಿಯಲ್ಲಿ ಉಲ್ಲೇಖಿಸಿದ ಪ್ರಮಾಣವಚನಗಳ ಪ್ರಾಯಃ ಆಕರವನ್ನು ಗುರುತಿಸಿ ನೀಡಲಾಗಿದೆ. ವಾಕ್ಯಗಳನ್ನು ಸೂಕ್ತ ರೀತಿಯಿಂದ ವಿಂಗಡಿಸಿ ಓದುಗರಿಗೆ ಸೌಕರ್ಯವನ್ನು ಕಲ್ಪಿಸಲಾಗಿದೆ. ಹಸ್ತಪ್ರತಿಯಲ್ಲಿ ಛಂದೋಭಂಗವೆನಿಸಿದಲ್ಲಿ ಸೂಕ್ತ ಪಾಠವನ್ನು ಸೂಚಿಸಲಾಗಿದೆ. ಮುದ್ರಿತಕೃತಿಯ ಹಾಗೂ ಪ್ರಸಕ್ತ ಮುದ್ರಿತ ಕೃತಿಯ ಪಾಠಭೇದ ಮತ್ತು ಶುದ್ಧ ಪಾಠಗಳನ್ನು ಹಿಗೆ ಗಮನಿಸಬಹುದು.

| ಪುಟ – ಪಂಕ್ತಿ | ಹಿಂದೆ ಮುದ್ರಿತ ಪಾಠ (ಕ ಸಂಜ್ಞಿತ) | ಪ್ರಕೃತ ಮುದ್ರಿತ ಪಾಠ (ಖ ಸಂಜ್ಞಿತ) |
|---|---|---|
| 21–14 | ಸಂವೃತ್ತೇಃ ಪ್ರತಿಘಾತೋ ಹಿ ಸಂಬಂಧಸ್ಯಾರ್ಥ ಸಂವಿದೋಃ | ಸಂವೃತಿಃ ಪ್ರತಿಘಾತೋ ಹಿ ಸಂಬಂಧಸ್ಯಾರ್ಥ ಸಂವಿದೋಃ |
| 28–13 | ಅಥವಾ ಚಿತಃ | ಅಥವಾ ಚಿತಾ |
| 45– 3 | ಸತ್ತ್ವೇ ಸತಿ ಸದ್ವಿಲಕ್ಷಣಮ್ ಅಸತ್ತ್ವೇ ಸತಿ ಅಸದ್ವಿಲಕ್ಷಣಮ್ ಸದಸದಾತ್ಮಕತ್ವೇ ಸತಿ ಸದಸದಾತ್ಮಕವಿಲಕ್ಷಣಮ್ | ಸತ್ತ್ವೇ ಸತಿ ಸದಸದ್ವಿಲಕ್ಷಣಮ್ ಅಸತ್ತ್ವೇ ಸತಿ ಸದಸದ್ವಿಲಕ್ಷಣಮ್ ಸದಸದಾತ್ಮಕತ್ವೇ ಸತಿ ಸದಸದ್ವಿಲಕ್ಷಣಮ್ |
| 113–16 | ಲಕ್ಷಣತ್ರಯಂ ಕೃತಮ್ | ತ್ರೀಣಿ ಲಕ್ಷಣಾನಿ |
| 127–17 | ಶೂನ್ಯಬದ್ಧಸದಾದ್ಯಾಃ | ಶೂನ್ಯಬದ್ಧಾಸದಾದ್ಯಾಃ |
| 133–7 | ಕರ್ಮಾಣಿ ಘಿಣಂತಾತ್ ದಧತ್ಯೋಷಧೀಃ | ಕರ್ಮಾಣಿ ಘಿಣ್ ತಾನ್ ದಧಾತೀತ್ಯೋಷಧೀಃ |

| | | |
|---|---|---|
| 209-1 | ಆಶಯೋ ಧರ್ಮಃ | ಆಶಯಃ ಧರ್ಮಾಧರ್ಮೌ |
| 215-3 | ಗತಿರ್ಜಗದ್ವ್ಯಾಪ್ಯಮ್ | ಗತಿಹೇತುರ್ಜಗದ್ವ್ಯಾಪ್ಯಮ್ |
| 216-15 | ತಥಾ ಜಗತಿ ಸದಸದ್ಭೇದಃ | ತಥಾ ಔಪನಿಷದಂ ಬ್ರಹ್ಮ ಸರ್ವಶಬ್ದಾವಾಚ್ಯಮ್ ವಿಶ್ವಂ ಸದಸದ್ಭಿನ್ನ-ಮಿತ್ಯಾದಿಕಮ್ |
| 218-7 | ಸುಖಸ್ಯ ದುಃಖಾಭಾವರೂಪತಾಪತ್ತೇಃ | ದುಃಖಸ್ಯ ಸುಖಾಭಾವರೂಪತಾಪತ್ತೇಃ |
| 228-4 | ಘಟೇ ದೃಷ್ಟಾಂತೇ ಆದ್ಯಃ ಆಕಾಶೇ ದೃಷ್ಟಾಂತೇ ದ್ವಿತೀಯಃ | ಆಕಾಶೇ ದೃಷ್ಟಾಂತೇ ಆದ್ಯಃ ಘಟೇ ದೃಷ್ಟಾಂತೇ ದ್ವಿತೀಯಃ |
| 219-10 | ಶ್ರುತಾದಿನಾ ಗಮ್ಯೋಽಯಮ್ | ಶ್ರುತಾದಿನಾ ನ ಗಮ್ಯೋಽಯಮ್ |

ಕೃತಜ್ಞತಾಸಮರ್ಪಣೆ :

ಪರಮಪೂಜ್ಯ ಗುರುಗಳೂ ಪೂರ್ಣಪ್ರಜ್ಞ ಸಂಶೋಧನ ಮಂದಿರದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರೂ ಆದ ಪೇಜಾವರ ಮಠದ ಶ್ರೀ ಶ್ರೀ 1008 ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಕರುಣೆಯಿಂದ ಈ ಕೃತಿಯ ಸಂಶೋಧನೆ ಯಥಾಮತಿ ಸಾಧ್ಯವಾಗಿದೆ. ಅನ್ನ-ವಸ್ತ್ರ-ಬ್ರಹ್ಮವಿದ್ಯೆ ನೀಡಿ ಅನುಗ್ರಹಿಸಿದ ಗುರುಗಳ ವಾತ್ಸಲ್ಯಕ್ಕೆ ಪ್ರತಿಯಾಗಿ ಭಕ್ತಿ-ಶ್ರದ್ಧಾಪೂರ್ವಕ ನಮನತತಿ ಗಳನ್ನಲ್ಲದೇ ಬೇರೆ ರೀತಿಯಿಂದ ಅವರ ಆನೃಣ್ಯವನ್ನು ಸಂಪಾದಿಸಲಾರೆ. ಅವರಿಗೆ ಪ್ರಣಾಮ ಸಂತತಿಗಳನ್ನು ಅರ್ಪಿಸುವೆ.

ಈ ಕೃತಿಯ ಸಂಶೋಧನೆಯಲ್ಲಿ ಸಂಶಯ-ಭ್ರಮೆಗಳನ್ನು ಪರಿಹರಿಸಿ ಉತ್ತಮ ಮಾರ್ಗದರ್ಶನ ನೀಡಿದವರು ಪೂಜ್ಯ ಗುರುಗಳೂ ಶ್ರೇಷ್ಠ ವಿದ್ವಾಂಸರೂ ಆದ ಪ್ರೊ। ಕೆ. ಹಯವದನ ಪುರಾಣಿಕರು. ಅವರಿಗೆ ನನ್ನ ಆದರಪೂರ್ವಕ ನಮನಗಳು.

ಸಮಗ್ರ ಸಂಶೋಧನಾಲಯದ ಪ್ರಗತಿ ವಿಚಾರಿಸುತ್ತ, ಉತ್ಸಾಹದಿಂದ ಕೆಲಸ ಮಾಡಲು ಪ್ರೇರಣೆಯಿತ್ತ ಹಿರಿಯ ವಿದ್ವಾಂಸರಾದ ಪ್ರೊ। ಡಿ. ಪ್ರಹ್ಲಾದಾಚಾರ್ಯರಿಗೆ ನನ್ನ ಆದರ ಪೂರ್ವಕ ನಮನಗಳು.

ನಮ್ಮ ಸಂಶೋಧನ ಮಂದಿರದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರಾದವರು ಮತ್ತು ಒಳ್ಳೆಯ ಕಾರ್ಯವನ್ನು ಕಂಡು ಆನಂದಿಸಿ ಪ್ರೋತ್ಸಾಹಿಸಿದ ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ನಿರ್ದೇಶಕರಾದ ಪ್ರೊ। ಕುಟುಂಬ ಶಾಸ್ತ್ರಿಗಳಿಗೆ ನನ್ನ ಆದರಪೂರ್ವಕ ವಂದನೆಗಳು. ಸಂಸ್ಥೆಯ ಪ್ರಗತಿಗೆ ಸೂಕ್ತ ಮಾರ್ಗದರ್ಶನ ನೀಡುತ್ತಿರುವ ಶ್ರೀ ಸಿ.ಎಸ್. ಕನಿಯಾಲ್, ವಿತ್ತಾಧಿಕಾರಿಗಳು ರಾಷ್ಟ್ರಿಯ ಸಂಸ್ಕೃತ ಸಂಸ್ಥಾನ, ನವದೆಹಲಿ ಇವರಿಗೂ ನನ್ನ ವಿಶ್ವಾಸಪೂರ್ವಕ ವಂದನೆಗಳು.

ಈ ಕೃತಿಯ ಮುದ್ರಣಕ್ಕೆ ಆರ್ಥಿಕ ನೆರವು ನೀಡಿದ ಮೈಸೂರಿನ ಶ್ರೀಯುತ ಎನ್. ಎಸ್. ರಾಮಚಂದ್ರರಾವ್ ಹಾಗೂ ಮಂಡ್ಯದ ಶ್ರೀಯುತ ರಮೇಶ ಆಚಾರ್ಯರಿಗೆ ನಾನು ತುಂಬ ಋಣಿಯಾಗಿದ್ದೇನೆ. ಈರ್ವರು ಮಹನೀಯರೂ ಗುರು-ದೇವತಾಭಕ್ತರು. ಜ್ಞಾನಕಾರ್ಯಗಳಲ್ಲಿ ಅವರಿಗಿರುವ ಶ್ರದ್ಧೆ ಅಪಾರ. ಅವರ ಮೂಲಕ ಇಂತಹ ಅನೇಕ ಕೃತಿಗಳು ಬೆಳಕು ಕಾಣಲೆಂದು ಆಶಿಸುವೆ.

ಗ್ರಂಥೋದಾಹೃತ ಪ್ರಮಾಣವಚನಗಳ ಆಕರ ಸೂಚಿ ಸಿದ್ಧಪಡಿಸುವಲ್ಲಿ ಸಹಕರಿಸಿರುವ ವಿದ್ವಾಂಸರಾದ ಶ್ರೀ ಪಿ. ವೆಂಕಟರಮಣ ಉಪಾಧ್ಯಾಯ, ಶ್ರೀ ರಂಗನಾಥ ಕಟ್ಟಿ, ಶ್ರೀ ಶಂಕರನಾರಾಯಣ ಅಡಿಗ, ಶ್ರೀ ಪಿ. ಗುರುರಾಜ ಉಪಾಧ್ಯಾಯ, ಶ್ರೀ ತಿರುಮಲ ಕುಲಕರ್ಣಿ ಇವರಿಗೆಲ್ಲ ನನ್ನ ಆದರ ಪೂರ್ವಕ ವಂದನೆಗಳು.

ಗಣಕಯಂತ್ರದಲ್ಲಿ ಅಕ್ಷರಸಂಯೋಜನೆಯನ್ನು ಶ್ರದ್ಧೆಯಿಂದ ಮಾಡಿದ ಶ್ರೀ ವ್ಯಾಸರಾಜ ಜೋಶಿ ಇವರಿಗೂ ವಂದನೆಗಳು.

ಉಪೋದ್ಘಾತದ ಆಂಗ್ಲ ಆವೃತ್ತಿಯನ್ನು ಸಿದ್ಧಪಡಿಸುವಲ್ಲಿ ಉಪಕರಿಸಿದ ಸಂಶೋಧನ ಮಂದಿರದ ಕಾರ್ಯಗಳಿಗೆ ಉತ್ತಮ ನೆರವು ನೀಡುತ್ತಿರುವ ಶ್ರೀ ಎನ್. ಎ. ಪಿ. ಎಸ್. ರಾಯರಿಗೆ ನನ್ನ ಆದರ ನಮನಗಳು.

ಸುಜನಚರಣರಜೋರಾಗೀ

**ಡಾ। ಎ.ವಿ. ನಾಗಸಂಪಿಗೆ**

# INTRODUCTION
# To
# SHRUTI SIDHANTA SAMGRAHA
## Composed by
## VANAMALI MISRA

**Vanamali Misra** (1650 – 1720 AD) was a redoubtable champion of the Dvaita school, in the Dvaita-Advaita polemical debates initiated by the Great Vyasatirtha (1478 – 1539) in his unmatched monumental works – *Tatparya Candrika* and *Nyayamruta*. Vyasatirtha was not only famous as the preceptor and advisor of the great emperor – Krishnadevaraya of the Vijayanagara empire, but also as scholar – authority, to whose court learned scholars paid obeisance from all over India. It is reputed that persons such as Vallabhacharya, Sri Krishna Chaitanya had visited his Ashrama, which was well known as a great center of learning of traditional Philosophic schools.

Not much has been discovered about the personal life and background of Vanamali Misra. Dr. B N K Sharma quotes his own statements that he belonged to Bharadwaja Gotra and had settled at Triyugapura, near Mathura (Vrindavan). Tradition identifies him as a "Hindi" (probably a dialect prevailing at that time) speaking Bihari, possibly from Gaya where the Brahmins had been converted into Tatvavada philosophy by Sri Vidyadhisha (1619 – 31). Dasgupta while agreeing with his place of residence near Mathura states that he was a follower of Nimbarka and this very composition – Shruthi Siddhanta Samgraha is a commentary on the Brahma Suthra Bhashya of Nimbarka! His opinion seems to be incorrect, as would be seen by the contents of this work strongly supporting and defending Tatvavada tenets and his offering his obeisance to Acharya Madhva and his famous commentator in this work as well as other works identified as his. He has also stated that he was a life celibate. He is credited with 12 works, out of which only one "*Marutamandana*" has been printed in the Saraswati Bhavan Skt series, no. 68. His major works *are Nyayamruta Saughandya* and *Tarangini Saurabha* – bearing clear references to Sri Vyasaraja's *Nyayamruta* and Ramacharya's *Tarangini*. It is very clear therefore, that Dasgupta's understanding

of his being a follower of Nimbaraka is incorrect. In fact, Vanamali Misra has used his great skills and learning as an able theologian and trained logician in destroying the arguments put forward by Brahmananda, trying to defend the Advaita doctrines as argued by *Advaita siddhi* of Madhusudana Saraswati, which started the polemics based on *Nyayamruta*.

In the second shloka of this work he writes:

श्रीमद्भाष्यकृतो वन्दे टीकाकृतस्तथा सतः ।
तदुच्छिष्टं हि सङ्गृह्णन् गच्छेयं पूज्यतां सताम् ॥

He is clearly offering his prostrations to Acharya Madhva (composer of Bhashya) and Teekacharya. Though their names have not been specifically mentioned, in the following shlokas, he has clearly prostrated to Madhva, Jayatirtha and Vyasatirtha in his *Brahma Sutra Siddhanta Muktavali.*

*श्रीमद् द्वैपायनं वन्दे मरुदंशमरिन्दमम् ।*
*कुमताब्धेरगस्त्यं च जयतीर्थं मुनीश्वरम् ॥*

(Initial shloka of *Brahmasuthramukthavali)*

*यतिगुरुमरुदंशं श्रीमदानन्दतीर्थम् ।*
*मतनिधिजयतीर्थं व्यासतीर्थं वन्दे ॥*

(Final shloka of *Brahmasuthramukthavali.)*

In *Madhvamukhalamkara* he says:

*श्रीमन्मारुतमाचार्यं मायिमर्दनतत्परम् ।*
*मुनीन्द्रोपास्यपादाब्जं ज्ञानसिन्धुं नमाम्यहम् ॥*

I prostrate before the great Acharya (Madhva), an incarnation of Maruta (Vayu), an ocean of knowledge, whose lotus feet are worshipped by great ascetics and who is wholly engaged in rejecting the doctrine propagated in Advaita (Mayimatha)

*तान्त्रिकाणां गुरुं वन्दे जयतीर्थं मुनीश्वरम् ।*
*कुमतध्वान्तचण्डांशुं व्यासतीर्थं दयानिधिम् ॥*

I prostrate to the great teacher Jayatirtha, the Guru of all sincere devotees of Sasthra and Panchrathragamas. I prostrate also before Vyasatirtha, the abode of wisdom, who is like the Sun in dispelling the darkness of evil doctrines

Prof. Bhandarkar's report (1882 – page 108 – 113) lists his works as follows:

**1. Nyayamruthasaugandhya**

**2. Nyayarathnakara**

**3. Advaitasiddhikhandana**

**4. Bhaktiratnakara**

**5. Marutamandana**

**6. Jiveshaabhedadhikkara**

**7. Pramanasamgraha**

**8. Brahmasuthrasiddhanthamuktavali**

**9. Vishnutatvaprakasha**

**10. Vedantadipika**

**11. Vedantasiddhnatasamgraha**

**12. Nyayamruthatharanginikantakoddhara**

**13. Abhinava parimala**

**14. Madhvamukhalamkara**

Dr. B N K Sharma, in his "History of the Dvaita school of Vedanta" (Pg 391) opines that No. 5 above - *Marutamandanam* is the same as No. 14 – *Madhvamukhalamkara.* He also feels that No. 3 - *Advaitasiddhikhandana* is presumably the same as *Tarangini saurabha* or some other work connected with *Nyayamruta* (No.12 above ?)

The subjects of his compositions, his major works which closely correspond to other well known Tatvavada compositions such as *Nyayamruta, Vishnutatavanirnaya* etc, as well as the traditional offering of prostrations to well known Tatvavada ascetics clearly establish that he was a sincere follower of Tatvavada and had composed his works in accordance with its tenets. Thus Vanamali Misra was one of the champions of Tatvavada from the North, amongst a strong group of able exponents and authors such as Gaudapurnananda, Radhadamodara (of Kannauj) and Baladeva Vidyabhushana.

**A BRIEF GLIMPSE of the present work:**

*Srutisiddhantasamgraha* has 7 Chapters:

First chapter describes the nature of the Aspirant and Teacher for Redemption, means for happiness or sorrow, worldly bondage due to

Ajnana and denunciation of action undertaken solely for worldly objectives.

In the Second Chapter, the importance of correct observance the daily prescribed rituals along with Sravana and Manana (Listening and Assimilation by contemplation) of prescribed Shastras is described. Though God is essentially imponderable in nature, He gives a glimpse of His person to His devotee, out of His great kindness, when He is pleased with the latter's devotion. When the devotee is redeemed into Mukthi, he secures eternal bliss, which is of his own essence and which is graded according to his intrinsic worth (Swaroopa yogyatha). There is no restriction that the liberated souls should continue to stay in Vaikunta, but they could stay in the earthen worlds or heavens (Bhu or Swarga lokas). The four kinds of liberated souls enjoy their endless bliss with the Grace of Hari. The concepts of Mukthi according to Jaina, Bauddha, Tharkika and Samkhyas are also examined and their shortcomings highlighted, demonstrating that Tatvavada's interpretation of the Vedanta concept of Mukti is the only correct one.

In the Third Chapter, the existence of the soul, as different from the body, senses and the mind is established. The happiness or sorrow seen in the living creatures as well as the ability to act (know, think or decide) is natural to them and are not imaginary. Though the soul is atomic, he pervades the body as a Prakasha (glow) and will experience the pleasures and sorrow caused through the body. He has the states of being Awake, Dreaming, deep Sleep and unconsciousness etc. One can secure God-vision (Sakshathkara) by practicing Yama, Niyama etc.

In the Fourth Chapter, it is shown that the creation, destruction etc of the Universe is an unique characteristic of Hari, who creates the world by Vikasa (transformation) of the Nature principle from its fine state. The proposition that Hari is Sarvashabdavaachya (object of description of all words) which is an important tenet of Tatvavada is stressed and established. In a similar manner, the tenets that Hari is essentially the same in His Mula roopa and Incarnations with an eternal body and His activity of Creation, Destruction are of four kinds are also described.

In the Fifth Chapter, the theory of Vishesha, an important contribution of Madhva to provide a satisfactory resolution of actual experience and logical inconsistencies in the doctrine of Difference is nicely explained. It is explained that in cases where Identity (Non-difference) is established as valid, but transactions involving Difference (apparent) are taking place, acceptance of the concept of Vishesha is inescapable. This is unavoidable even for Advaita. Brahman is the Nimittha Karana (Active cause) for the universe and is also denoted by all words in their fundamental meanings. In this context, the strong influence of Chandrika can be seen in explanations regarding words which are Ubhayathra Prasiddha and Anyathra Prasiddha, when denoting Brahman. In the comments on Brahma Suthras, in Anandamayadhikarana, the commentary as per Advaita is analysed to show beautifully that Brahman is described in all the five prakaranas (sections) from Annamaya to Anandamaya. Vedic texts describing Brahman as Akarthru (non-doer) and Nirguna (without any attributes) are explained by drawing attention to their deeper meanings, showing that only the Real can be an object for worship (The Brahman of Advaita can never be an object of worship). Thus the essence of devotion is explained.

In the Sixth Chapter, it is explained that after realizing that all other worlds except the abode of Hari are subject to impermanence and destruction, one should renounce the world's pleasures and engage in Sravana and Manana. Contemplation and worship of Identity between the Supreme Being and the soul leads to serious disasters. The Difference seen between God and soul described as Vyavaharika (limited to the universe of Samsara with births and deaths and not real in its essence) is only a presumption. There is no valid pramana in any Shruthi or Smrithi to prove this. The similarities and differences between Bauddhas and Advaita are also discussed. The rejection of Charvaka, Jaina, Bauddha and Tharkika schools is also exhilarating. Many texts such as *'परेऽव्यये सर्व एकीभवन्ति, 'तत्त्वमसि', 'द्वितीयाद्वै भयं भवति', 'विभेदजनके ज्ञाने'* etc are analysed to show that their superficial meaning appearing to support Identity is to be correctly reinterpreted to support the reality of the world, Difference between the Supreme Being, souls and Inert nature.

In the Seventh Chapter, texts such 'नेति नेति', 'रूपं रूपं प्रतिरूपो बभूव', 'अहं मनुरभवं सूर्यश्च', 'असङ्गो ह्ययं पुरुषः' etc are also examined with regard to their correct interpretation. As a topical issue, the reality of the dream objects is also established and the composition is concluded.

## DISCUSSIONS ON A FEW IMPORTANT ISSUES

We would like to take up for more detailed discussions a few issues to illustrate the profound scholarship and deep insight of Vanamali Misra in Tatvavada.

1. Residence of liberated souls in worlds such as earth.

Sri Anandatirtha (Acharya Madhva) has delineated four forms of the Mukta (liberated) state of the souls in the background of the Scriptures. The soul attains the level of bliss appropriate to his innate worth, which is of his own essential nature and resides on the Earth, heavens etc (Bhu and Swarga). Mukthi is going back to one's own pure nature, coming out of all external imperfections imposed on it – 'मुक्तिर्हित्वान्यथारूपं स्वरूपेण व्यवस्थितिः'. There is no bar that all Muktas must remain in Vaikunta and there is gradation in their state of bliss. This clear enunciation of doctrine is also woven into the original composition and it's commentary written by himself, of Vanamali Misra.

केचिदत्रैव मुच्यन्ते केचित् क्षीरजलोदधौ ।
केचिद्वै सत्यलोकादौ अन्तरिक्षे हि केचन ।। (2.41)

It's meaning is explained thus : The (liberated) soul comes out of his external and Linga bodies and goes into his Swaroopa body while attaining God, who is of the nature of knowledge and other auspicious qualities. He secures all his desires at will. The soul who has worshipped God as his own Aathman (inner controller) will get Sakshathkara (direct vision of the Lord), complete his prescribed Prarabdha Karma, give up his Linga body, obtain the vision of the form of Para Vasudeva in Shwethadvipa and after obtaining his final release from bondage with His grace, resides in the different Lokas like earth, Anthariksha etc to enjoy his innate bliss.

Some specially qualified souls reach the Milky ocean (Kshira-sagara). Others more qualified reside very near God Himself. Salokya mukthi is residing near the form of God in each Loka and enjoying one's innate bliss with His Grace. Sarupya consists of attaining a divine form similar to that of God with the Conch, discus, Mace and other insignia of God. Sameepya consists of being close to God always and secure bliss due to the very nearness. Sayujya souls stay in the parts of the body of Sri Hari and get their bliss through them. Thus liberated souls stay in different places right from the earth to the Ocean of Milk as per their innate worth.

Vanamali Misra has quoted the following verses from the Madhva Bhashya in this regard –

*केचिदत्रैव मुच्यन्ते नोत्क्रामन्ति कदाचन ।*
*अत्रैव च स्थितिस्तेषाम् अन्तरिक्षे तु केचन ॥*
*केचित्स्वर्गे महर्लोके जने तपसि चापरे ।*
*केचित् सत्ये महाज्ञानाः गच्छन्ति क्षीरसागरम् ॥*
*तत्रापि क्रमयोगेन ज्ञानाधिक्याद् समीपगाः ।*
*सालोक्यं च सरूपत्वं सामीप्यं योगमेव च ।*
*इमामारभ्य सर्वत्र यावत्सु क्षीरसागरे ॥*

2. Jnana (knowledge for liberation) does not destroy Prarabdha karma:

After the special God vision (Aparoksha), the Jnani (aspirant for God knowledge) will have all his sins destroyed, in the same manner as a spark can destroy a large bale of cotton. This is the purport of Shruthies and Smrithies. Sri Krishna in the Geetha has also said *'ज्ञानाग्निः सर्वकर्माणि भस्मसात् कुरुतेऽर्जुन'* – the fire of Jnana will destroy all Karmas. This should be interpreted correctly. Karma is of 3 kinds – Sanchitha, Aagaami and Prarabdha. After Aparoksha, Sanchitha Karma (Accumalation from the past) will definitely be destroyed. Except the Karma due to creating displeasure in superior persons, not new Karma will be acquired, even if they are performed, as they will be Nishkama

and will be only for pleasing God. The experience of the results of Prarabdha Karma, however, is unavoidable. The number of lives (with births and deaths) which are necessary to completely suffer Prarabdha has to be gone through, only after which the soul reached God. *'तस्य तावदेव चिरं यावन्न विमोक्ष्ये अथ सम्पत्स्ये' (Chandogya 6.14.02) and 'अनारब्धकार्ये एव तु पूर्वे तदवधेः' (Brahmasuthra 4.1.15)* indicate this.

There is some confusion about Prarabdha karma in Advaita and Vishishtadavaita texts. Sri Shankara, in his commentary on *'अनारब्धकार्ये एव तु पूर्वे तदवधेः' (Brahmasuthra 4.1.15)* says that even the knower of Brahman has to necessarily stay on in a gross body for some time – as the experience of Advaita tatva (Identity with Brahman) and possessing a body at the same time can not be denied. –

*'अपि च नैवात्र विवदितव्यम्, ब्रह्मविदा किञ्चित्कालं शरीरं ध्रियते न वेति। कथं ह्येकस्य स्वहृदयप्रत्ययं ब्रह्मवेदनं देहधारणं चापरेण प्रतिक्षेप्तुं शक्येत।'*

Similarly in the Suthra *'भोगेन त्वितरे क्षपयित्वाथ सम्पत्स्यते'* (4.2.19), he says that while the results of all Karmas other than Prarabdha are destroyed due to the acquisition of (Advaita) jnana, achieving Identity with Brahman will be only after the results of Prarabdha Karmas are suffered. This is indicated by the shruthi –

*'तस्य तावदेव चिरम्' – Chandogya 6.14.2.*

*भोगेन त्वितरे क्षपयित्वाथ सम्पत्स्यते',*

*'अनारब्धकार्ययोः पुण्यपापयोः विद्यासामर्थ्यात् क्षय उक्तः। इतरे त्वारब्धकार्ये पुण्यपापे उपभोगेन क्षपयित्वा ब्रह्म सम्पद्यते। तस्य तावदेव चिरं यावन्न विमोक्ष्ये अथ सम्पत्स्ये' – (Chandogya 6.14.2).*

*'ब्रह्मैव सन् ब्रह्माप्येति इत्येवमादिश्रुतिभ्यः।*

Similarly *Bhamathi* and *Ishtasiddhi* say:

*'तस्मादागमानुसारतोऽस्ति प्रारब्धविपाकानां कर्मणां प्रक्षयाय तदीयसमस्त-पापोपभोगप्रतीक्षा सत्यपि तत्त्वसाक्षात्कारे' (P957)*

'तस्माद् विदुषोऽपि किञ्चित्कालं शरीरस्थितेरभ्युपेयत्वात् तावन्मात्रहेतुरविद्याशेषगन्धोऽभ्युपेयः ।

This interpretation is necessary for Advaita. Advaita Sakshathkaara – realization of Identity with Brahman means that there is full and unsublated knowledge that there is only one Chethana (Brahman) which is real and the soul is Brahman only. The other side of the experience of Advaita has to be uncontroverted knowledge that all else including the World and other souls etc are Mithya – false. Such a person cannot undertake teaching of disciples (who do not really exist) and acquiring alms for maintenance of his body (all of which do not exist). Therefore, as Gaudapada, Shankara and other eminent teachers of Advaita have undertaken teaching to other disciples, seeking alms for food etc they could not have had Advaita Sakshathkaara. Those who have had it, cannot teach and those who teach, will be still lacking actual experience of what they teach others. If the proposition that even Brahma Jnanis (those that have realized Brahman) have to suffer Prarabdha, and Avidya continues for some time to have its hold on them, it could be argued that Advaita teachers are such persons who have experienced Identity experience, but continue in the world due to Prarabdha only. Thus their teachings are valid.

But, in reality, it is not really useful for Advaita. Avidya is not an entity which can be partitioned or can exist in parts. If it is argued that the only real Chethana (Brahman) continues to be under the influence of Avidya, even after Identity experience, how can it be postulated that Avidya will ever go away completely (in the absence of any further antidote). Just as the brilliant sun can harbour darkness, it is inconsistent for Advaita to argue that Avidya still remains in part, after the Identity knowledge is realized completely. Such experience being imperfect, cannot be a true Identity experience at all, as stipulated by Advaita. Therefore, after such complete cognition of Identity and identification of the self with the only real entity – Brahman – delusions about "my body", "My disciples" etc can not continue. Using the convenient argument of Prarabdha karma, to justify additional births etc cannot form a valid reason.

